# 94

# ಯಕ್ಷಗಾನ ನಾಟಕದ ಪರಂಪರೆ

ಮತ್ತು

# ಕೃತಿಗಳು

ಲೇಖಕರು:

**ಶ್ರೀ। ಮಂಜುನಾಥ ಭಾಗವತ,**

ಕಡತೋಕಾ, ಉತ್ತರ ಕನ್ನಡ.

1956.

ಒಂದಾಣೆ




ಮಾಲೆ

# 'ಒಂದಾಣೆ ಮಾಲೆ'ಯ ಪ್ರಕಟಣೆಗಳು:

೧ *ಕೆಪ್ಪಟಿರಾಯ; ೨ ನಾರೀಶ್ವರರು (ದ್ವಿ. ಮುದ್ರಣ); ೩ ಕಳ್ಳನಿಗೆ ಸಂಭಾವನೆ (ದ್ವಿ. ಮುದ್ರಣ) ೪ *ಸದ್ರಿಸುಬ್ಬ; ೫ ಅದ್ಭುತ ತ್ಯಾಗ (ದ್ವಿ. ಮುದ್ರಣ); ೬ *ಚುನಾವಣೆ ಅರ್ಥಾತ್ ಬನಾವಣೆ; ೭ *ಬೀಡಿ ಸೇದಬೇಡಿ ಮತ್ತು ಆ ಮಗು; ೮ *ಇಂಗ್ಲಿಷ್–ಕನ್ನಡ ಅರ್ಥಕೋಶ; ೯ ಲಂಚಕ್ಕೆ ಸಂಚಕಾರ (ದ್ವಿ. ಮುದ್ರಣ); ೧೦ *ಟಿಶ್ಯೂ ಔಷಧಿಗಳ ಕೈಪಿಡಿ; ೧೧ *ಶ್ರೀಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ); ೧೨ ಜೀವದ ಮೌಲ್ಯ ಮತ್ತು ಇತರ ಕಥೆಗಳು; ೧೩ ಸತ್ತವನ ಸೇಡು ಮತ್ತು ಇತರ ಕಥೆಗಳು; ೧೪ *ವೆಂಕಟನ ಸಂಕಟ; ೧೫ ಬಾಬಿಗೆ ಬಾಸಿಂಗ (ದ್ವಿ. ಮುದ್ರಣ); ೧೬ ವೇಣೂರಿನ ಗತವೈಭವ (ದ್ವಿ. ಮುದ್ರಣ); ೧೭ ಒಗಟುಗಳು (ದ್ವಿ. ಮುದ್ರಣ); ೧೮ ಜಗಳಗಂಟಿ ಮತ್ತು ಇತರ ಕಥೆಗಳು; ೧೯ ರಥೋತ್ಸವ; ೨೦ ಕರಿನಾಯಿ ಮತ್ತು ಮುಪ್ಪು; ೨೧ ಭಾರತದ ಮಹಾನಗರ–I (ದ್ವಿ. ಮುದ್ರಣ); ೨೨ ತಿರುಕ್ಕುರಲ್ (ದ್ವಿ. ಮುದ್ರಣ); ೨೩ ಸೂರ್ಯನ ಸಂಸಾರ; ೨೪ ಭಾರತದ ಮಹಾನಗರ-II (ದ್ವಿ. ಮುದ್ರಣ); ೨೫ ಧೈರ್ಯ ಮತ್ತು ಇತರ ಸತ್ಯ ಕಥೆಗಳು; ೨೬ ಮಾರಾವತಾರ (ದ್ವಿ. ಮುದ್ರಣ); ೨೭ ಹಾಸವಿಲಾಸ; ೨೮ ಸತ್ಯವಂತ ಬಾಬಿ [ದ್ವಿ. ಮುದ್ರಣ]; ೨೯ ಜಾಣ್ಮೆಯ ಒಗಟುಗಳು ೩೦ ಜಾತಕ ಕಥೆಗಳು; ೩೧ ಕಾರ್ಕಳದ ಚರಿತ್ರೆ; ೩೨ ಮರ್ಜಿ; ೩೩ ದರ್ಶನದ ಕಥೆಗಳು; ೩೪ ಅಳುವಿನ ಹೊಳೆ ಮತ್ತು ಕೇಶವಭೂಪ; ೩೫ ಶರಾಬಿನ ಪೀಪಾಯಿಗಳು; ೩೬ ಉಪದೇಶ ಶತಕ; ೩೭ ನಿಮಗೆ ಗೊತ್ತಿದೆಯೇ?; ೩೮ ಚತುರ ಚಮತ್ಕಾರ; ೩೯ ಸತೀ ಸಾವಿತ್ರಿ (ದ್ವಿ. ಮುದ್ರಣ); ೪೦ ಆಭರಣಗಳ ಪೆಟ್ಟಿಗೆ ಮತ್ತು ಇತರ ಕಥೆಗಳು; ೪೧ ಭಾರತದ ಮಂತ್ರಿಮಂಡಲಗಳು (ದ್ವಿ. ಮುದ್ರಣ); ೪೨ ಕಾಲುಬಳೆಯ ಕಥೆ; ೪೩ ಭಾರತದ ನಾಲ್ಕು ಕಲಶಗಳು; ೪೪ ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು; ೪೫ ಸುಭಾಷಿತ; ೪೬ ೧೮೫೭ರ ಸಿಪಾಯಿದಂಗೆ; ೪೭ ಅಕಾಂಡ ತಾಂಡವ; ೪೮ ಸಾಹಸದ ಕಥೆಗಳು; ೪೯ ಸಂಜ್ಞಾಜ್ಞಾನಕೋಶ; ೫೦ ಪಂಡಿತನ ಪಿಟೀಲು; ೫೧ ಭೋಗಯಾತ್ರೆ; ೫೨ ಸಂಗ್ರಾಮಸಿಂಹ; ೫೩ ಧರ್ಮಶಿಕ್ಷಾ; ೫೪ ಮಹಾತ್ಮ; ೫೫ ಮೀರಾಬಾಯಿ; ೫೬ ವೀರರಮಣಿ ಕರ್ಮದೇವಿ; ೫೭ ಅರಳಿದ ನಗು; ೫೮ ಸಚಿತ್ರ ಜಪಾನ್; ೫೯ ಚುಟ್ಟಬಿಟ್ಟಧಿಟ್ಟ; ೬೦ ನಿರಪರಾಧಿ; ೬೧ ಭಕ್ತವಾಣಿ; ೬೨ ಜಾನಪದ ಸಾಹಿತ್ಯ; ೬೩ ಡಾಕ್ಟರ್ ಆರೋಗ್ಯಮ್; ೬೪ ಲೌಕಿಕ ನ್ಯಾಯಗಳು; ೬೫ ಶಿಶುಪಾಲ ಮಾನಭಂಗ; ೬೬ ಜರಾಸಂಧ ವಧೆ; ೬೭ ಜವಾಹರಲಾಲ (ದ್ವಿ. ಮುದ್ರಣ; ೬೮ ಕರುಣೆ ಮತ್ತು ಇತರ ಕಥೆಗಳು; ೬೯ ಶ್ರೀಕ್ಷೇತ್ರ ಉಡುಪಿ; ೭೦ ವಿನೋದ ವಿಹಾರ; ೭೧ ಭಾರತದ ಗತವೈಭವ; ೭೨ ಸತ್ಯ ಹರಿಶ್ಚಂದ್ರ; ೭೩ ಸೂಕ್ತಿಗಳು; ೭೪ ಉ.ಕ.ದ ಯಕ್ಷಗಾನ ಕಲಾವಿದರು; ೭೫ ದೇವರ ಸಾಮ್ರಾಜ್ಯದಲ್ಲಿ...; ೭೬ ಕ್ರಾಂತಿಕಂಠೀರವ ಭಗತ್‌ಸಿಂಘ್; ೭೭ ಜಾತಕಪಠನ ಮತ್ತು ಇತರ ಕಥೆಗಳು; ೭೮ ಅಮೃತವಾಣಿ; ೭೯ ಮಾಯಾಮೃಗ; ೮೦ ಡಾಕ್ಟರ್ ಗಾಂಧೀಜಿ; ೮೧ ಆದಿಶ್ರೀ ಶಂಕರಾಚಾರ್ಯರ ಜೀವನ ಚರಿತ್ರೆ; ೮೨ ಆದಿಶ್ರೀ ಶಂಕರಾಚಾರ್ಯ ವಿರಚಿತ ಸ್ತೋತ್ರಗಳು (ಅರ್ಥ ಸಹಿತ); ೮೩ ಬೆಡಗಿನ ನಾಡು ಕೊಡಗು; ೮೪ ಆಮೆಯ ಚಿಪ್ಪು ಮತ್ತು ಇತರ ಸತ್ಯಕಥೆಗಳು; ೮೫ ಮಂಗಳೂರಿಂದ ಮಥುರೆಗೆ; ೮೬ ಸತೀ ವೃಂದಾ; ೮೭ ಗೌತಮನ ಗೃಹತ್ಯಾಗ; ೮೮ ಗೃಹವೈದ್ಯ; ೮೯ ನಮ್ಮ ನಾಟಕಗಳು; ೯೦ ಜಾನಪದ ಕಥೆಗಳು; ೯೧ ಕೆಲವು ಉಪಯುಕ್ತ ಸಲಹೆಗಳು. ೯೨ ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ. ೯೩ ಹೋಮಿಯೋಪಥಿ-ಚಿಕಿತ್ಸಾಸಾರ. ೯೪ ಯಕ್ಷಗಾನ ನಾಟಕದ ಪರಂಪರೆ.

*ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧.

# ಯಕ್ಷಗಾನ ನಾಟಕದ ಪರಂಪರೆ ಮತ್ತು ಕೃತಿಗಳು

ಯಕ್ಷಗಾನ-ನಾಟಕವು ಕರ್-ನಾಟಕದ ಕಲಾ ವೈಶಿಷ್ಟ್ಯ. ನಾಟ್ಯ, ಗಾನ, ವಾದನ, ಭಾಷಣ, ಅಭಿನಯ, ಹಾವ-ಭಾವ ಮತ್ತು ಬಣ್ಣ-ಬೆಡಗುಗಳಿಂದ ಮಿಲನಗೊಂಡ ಮಧುರವೂ ಮಹತ್ವಪೂರ್ಣವೂ ಆದ ಈ ಕಲೆಯನ್ನು, ರಸಾತ್ಮಕವಾಗಿ ಸರಿಗಟ್ಟುವ ಇನ್ನೊಂದು ಬಗೆಯ ನಾಟ್ಯ ವಿಧಾನ, ಕರ್ನಾಟಕದಲ್ಲಿಯೇ ಏಕೆ? ಭಾರತದಲ್ಲಿಯೇ ಇಲ್ಲವೆನ್ನಲು ಯಾವ ಪ್ರತ್ಯವಾಯವೂ ಇಲ್ಲ. ಕನ್ನಡ ಜನಪದದ ಜೀವನದಲ್ಲಿ ಓತಪ್ರೋತವಾಗಿ ಸೇರಿಕೊಂಡು, ಬಾಳಿಗೊಂದು ದಿವ್ಯ, ಭವ್ಯ ಸೌಂದರ್ಯವನ್ನು ನೀಡಿ ಕನ್ನಡಾಂಬೆಯ ಶಿರೋಭೂಷಣವಾಗಿ ಬೆಳಗುತ್ತಲಿದೆ ಈ ಯಕ್ಷಗಾನ ನಾಟಕ.

ಈ ಯಕ್ಷಗಾನ ನಾಟಕವನ್ನು "ದಶಾವತಾರ ಆಟ," "ಭಾಗವತರಾಟ," "ಬಯಲಾಟ"ಗಳೆಂತ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಈ ಆಟವೇ ಯಕ್ಷಗಾನ ನಾಟಕ. ನಮ್ಮಲ್ಲಿ ಸಂಗೀತ ನಾಟಕಗಳಿಗೆ ಮಾತ್ರ "ನಾಟಕ"ವೆಂದು ಹೇಳುವದು ಪರಂಪರಾಗತವಾಗಿ ಬಂದ, ಸಂಪ್ರದಾಯವಾಗಿಬಿಟ್ಟಿದೆ; ಆದರೆ ಯಕ್ಷಗಾನ ಆಟಕ್ಕೂ ನಾಟಕವೆಂದು ಕರೆಯುವದರಲ್ಲಿ ಔಚಿತ್ಯ ಭಂಗವಾಗಲಾರದು; ಅದು ಯುಕ್ತ, ಯೋಗ್ಯ, ಎನ್ನುವದೇ ಈ ಲೇಖನದ ಉದ್ದೇಶವಾಗಿದೆ.

"ಆಟ"–"ಆಡು" ಇದು ದೇಸಿಪದ. "ನಾಟಕ" "ನಟ್" ಧಾತುವಿನಿಂದ ಹುಟ್ಟಿದ ನಾಟ್ಯ, ಅಥವಾ ನಾಟಕವೆಂಬ ಸಂಸ್ಕೃತ ಪದ. ಪ್ರಾಚೀನ ಹಳೆಗನ್ನಡ, ಹಳೆಗನ್ನಡ, ನಡುಗನ್ನಡ, ಹೊಸಗನ್ನಡಗಳ ರೂಪರೇಖೆಗಳು, ಮಾರ್ಪಾಟಾಗುತ್ತಾ ಬಂದ ರೀತಿ, ಱಳ, ಕುಳ, ಕ್ಷಳಗಳು ಮಾಯವಾಗುತ್ತಾ ಬಂದ ಬಗೆ, ಸತಿಸಪ್ತಮಿ ಪ್ರಯೋಗ, ಮೊದಲಾದವುಗಳ ಶೈಥಿಲ್ಯಗಳನ್ನು, ಪರಿಶೀಲಿಸಿದರೆ, ಹಳೆಗನ್ನಡ ಗ್ರಂಥಗಳ ಅವಲೋಕನೆಯಿಂದ ಕನ್ನಡವು ಸಂಸ್ಕೃತಕ್ಕೆ ಶರಣಾಗಿ ತಲೆಬಾಗುವ ಮುಂಚೆ, ಕನ್ನಡಕ್ಕೆ ತನ್ನತನದ, ಒಂದು ಸ್ವತಂತ್ರವಾದ ಸ್ಥಾನವಿತ್ತೆಂದು ತಿಳಿದುಬರುವಂತಿದೆ.

ಕನ್ನಡದಲ್ಲಿ ಅನ್ಯದೇಸಿ, ಸಂಸ್ಕೃತ, ಸಮಸಂಸ್ಕೃತ, (ತತ್ಸಮ) ತದ್ಭವಗಳೆಲ್ಲಾ ಕೂಡಿಕೊಂಡಿವೆ. ಕನ್ನಡದಲ್ಲಿ ೧೦೦ಕ್ಕೆ ೭೦ರಷ್ಟು ಸಂಸ್ಕೃತ ಶಬ್ದಗಳು ಬೆರಕೆಯಾಗಿವೆ. ನಿಜಗನ್ನಡದ, ನೇಸರ್, ಅಲರ್, ಅಳಿಲ್, ಮೂಡು, ತೆಂಕು, ಪಡು, ಇತ್ಯಾದಿ ಶಬ್ದಗಳ ಪ್ರತಿನಿಧಿಗಳಾಗಿ, ಸೂರ್ಯ, ಹೂ, ಗಾಳಿ, ಪೂರ್ವ, ದಕ್ಷಿಣ, ಪಶ್ಚಿಮಗಳೆಂಬ ಸಂಸ್ಕೃತ ಪದಗಳು ರೂಢಿಯಾಗಿ ಬಂದಿವೆ; ಇದರಂತೆ ಯಕ್ಷಗಾನ "ಆಟ"ವೆಂಬ ಕ್ರೀಡಾನಕ, ದೇಸಿಗೆ—ಕನ್ನಡಕ್ಕೆ, ''ನಾಟಕ''ವೆಂಬ ಸಂಸ್ಕೃತ ಹೆಸರು ಹೊಂದಿರ ಬಹುದು.

ಇನ್ನು ಪಂಚಮ ವೇದವಾದ ನಾಟ್ಯವೇದವನ್ನು ರಚಿಸಿದ ಭರತ ಮಹರ್ಷಿಯಿಂದ ಇದು ಹೇಗೆ ನಿಷ್ಪನ್ನವಾಯಿತು? ಇದರ ಕಾರಣವೇನು? ಎಂಬುದನ್ನು ಅರಿತುಕೊಂಡರೆ, ನಮ್ಮ ಲೇಖನಕ್ಕೆ ತುಂಬಾ ಅನುಕೂಲ ವಾಗುವುದು:—

ಅತ್ರೇಯಾದಿ ಅನೇಕ ಋಷಿಗಳು ನಾಟ್ಯಾಚಾರ್ಯನಾದ ಭರತ ಮುನಿಯಲ್ಲಿ ಅನಧ್ಯಯನದ ಅದೊಂದು ಕಾಲದಲ್ಲಿ ನಾಟ್ಯವೇದದ ಕುರಿತು ಪ್ರಶ್ನಿಸಿದಾಗ ಭರತಋಷಿ ಕೊಟ್ಟ ಉತ್ತರವು ನಾಟ್ಯ ಶಾಸ್ತ್ರದ ಆರಂಭದಲ್ಲಿ ಮನೋರಂಜಕವಾಗಿದೆ. ಅದರ ಮುಖ್ಯಾಂಶವು ಹೀಗಿದೆ—

ಸ್ವಾಯಂಭು ಮನುವಿನ ಕೃತಯುಗದ ಅಂತ್ಯ, ವೈವಸ್ವತ ಮನುವಿನ ತ್ರೇತಾಯುಗದ ಪ್ರಾರಂಭ, ಈ ಯುಗಸಂಧಿ ಕಾಲದಲ್ಲ ವೈದಿಕ ಧರ್ಮವು ಲೋಪ ಹೊಂದುತ್ತಾ ಬಂದು, ಗ್ರಾಮ್ಯ ಧರ್ಮಗಳು ತಲೆಯೆತ್ತಿದವು. ಆರ್ಯಾವರ್ತ—ಭಾರತದಲ್ಲಿ ಇದರಿಂದ ಸಾಮಾಜಿಕ ಅವ್ಯವಸ್ಥೆ, ಧಾರ್ಮಿಕ ಪತನಗಳುಂಟಾಗಿ, ದೇವ, ದಾನವ, ಗಂಧರ್ವ, ಯಕ್ಷ, ರಾಕ್ಷಸ, ನಾಗಾದಿ ಗಳೆಲ್ಲರೂ, ಸ್ವೇಚ್ಛಾನುರೋಧದಿಂದ ವರ್ತಿಸತೊಡಗಿದ ಕಾರಣ, ಅರಾಜ ಕತೆ—ಅನಾಯಕತ್ವ ಪ್ರಾಪ್ತವಾಯಿತು. ದಿಗಿಲುಗೊಂಡ ದೇವೇಂದ್ರನೇ ಮೊದಲಾದ ದೇವತೆಗಳು, ಸೃಷ್ಟಿಕರ್ತನಲ್ಲಿ ಮೊರೆಯಿಟ್ಟು ಸಂಸ್ಕೃತಿ ರಕ್ಷಣೆಗೂ, ಸಮಾಜಶಿಕ್ಷಣಕ್ಕೂ ಅವಶ್ಯವಾದ ದೃಶ್ಯವೂ, ಶ್ರಾವ್ಯವೂ, ಆಗಿರುವ ಒಂದು ಕ್ರೀಡಾನಕ—ಆಟದ ವಸ್ತುವನ್ನು ನಿರ್ಮಿಸಿಕೊಡಬೇಕೆಂ ತಲೂ, ಅದು ಚಾತುರ್ವರ್ಣ್ಯದವರಿಗೂ, ಎಲ್ಲಾ ಜನರಿಗೂ, ಅನಿಷಿದ್ಧವಾಗಿ ಆನಂದ, ವಿನೋದಗಳನ್ನುಂಟುಮಾಡುವಂಥದಾಗಿರಬೇಕೆಂತಲೂ ಬಿನ್ನ ವಿಸಿಕೊಂಡರು.

ಇಲ್ಲಿ ಕ್ರೀಡಾನಕ—ಅಥವಾ ನಾಟಕ, ಎಂದರೆ ಆಟದ ವಸ್ತುವೆಂದೂ, ಅದು ಲೋಕಶಿಕ್ಷಣದ ಅಂಗವಾಗಿರಬೇಕೆಂದೂ, ಸಂಸ್ಕೃತಿ ಪಾಲನೆ-ಸಂವರ್ಧನೆಗಳ, ಅಂಗವಾಗಿರಬೇಕೆಂದೂ, ಸುರರ ಸ್ಪಷ್ಟ ಕೋರಿಕೆ ಇದೆ; ಕಾರಣ, ಆಟವೆಂದರೆ ನಾಟಕ, ನಾಟಕವೆಂದರೆ ಆಟ. ಇಲ್ಲಿ ಕನ್ನಡ, ಸಂಸ್ಕೃತಗಳ ಪರಸ್ಪರ ಪರಿವರ್ತನೆಯಾಗಿದೆ.

ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ, ಬ್ರಹ್ಮನು ಯೋಗಾಸನಸ್ಥಿತನಾಗಿ, ನಾಲ್ಕು ವೇದಗಳನ್ನು ಸ್ಮರಿಸಿ, ಐದನೆಯ ನಾಟ್ಯವೇದವನ್ನೂ, ಅದರಲ್ಲಿ ಅನೇಕ ಕಥೆಗಳನ್ನೂ ಸಂಕಲ್ಪಿಸಿ, ಧರ್ಮಸಾಧಕ, ಧನದಾಯಕ, ಕೀರ್ತಿಕಾರಕವಾಗಿದ್ದು ಜನಗಳಿಗೆ ಉಪದೇಶವನ್ನೀಯುವ, ಧರ್ಮ ಅರ್ಥಾದಿ ಪುರುಷಾರ್ಥ ಸಿದ್ಧಿಯುಳ್ಳ, ನಾಟ್ಯವೇದವನ್ನು ವಿರಚಿಸಿದನು. ಇದರಲ್ಲಿ ಕ್ರಮವಾಗಿ, ಋಗ್ವೇದದಿಂದ ಪಠನಕ್ಕುಚಿತವಾದ ಮಂತ್ರಗಳನ್ನೂ, ಯಜುರ್ವೇದದಿಂದ ಅಭಿನಯವನ್ನೂ, ಸಾಮವೇದದಿಂದ ಗಾಯನವನ್ನೂ, ಅಥರ್ವಣ ವೇದದಿಂದ ರಸಗಳನ್ನೂ ಸಂಗ್ರಹಿಸಿದನು. ಬ್ರಹ್ಮನು ರಚಿಸಿದ ನಾಟ್ಯಶಾಸ್ತ್ರವನ್ನು ನಟರಾಜನಾದ ಶಂಕರನು ನಾರದನಿಗೆ ಉಪದೇಶಿಸಿದ ಬಳಿಕ ಭರತ ಮುನಿಗೆ ಶಿವನೇ ಉಪದೇಶಿಸಿದನೆಂತ ಆಖ್ಯಾಯಿಕೆ ಇದೆ.

ದೇವ--ದೈತ್ಯರ ಸಂಗ್ರಾಮದಲ್ಲಿ ದೇವತೆಗಳು ವಿಜಯ ಪಡೆದ ಸಂತೋಷದ ಪ್ರದರ್ಶನಾರ್ಥವಾಗಿ, ದೇವರಾಜನು "ಧ್ವಜಮಹ" ಎಂಬ ದೊಡ್ಡ ಸಮಾರಂಭವನ್ನು ಪ್ರಾರಂಭಿಸಿದನು. ಆ ದಿವ್ಯ ಸಂದರ್ಭದಲ್ಲಿ ಭರತ ಋಷಿಯು ನಾಂದಿಯನ್ನುಚ್ಚರಿಸಿ, ದೇವತೆಗಳಿಂದಾದ "ಧಾನವ ಪರಾಭವ"ದ ಒಂದು ಆಟ--ನಾಟಕವನ್ನು ಆಡಿತೋರಿಸಿದನು. ಇದೇ ಪುರಾಣ ಪ್ರಸಿದ್ಧವಾದ ಆದ್ಯನಾಟಕ "ಲಕ್ಷ್ಮೀ ಸ್ವಯಂವರ." ಇದರಿಂದ ಆನಂದತುಂದಿಲರಾದ ದೇವತೆಗಳು, ದೇವಯೋನಿ-ವಿಶಿಷ್ಟರಾದ ವಿದ್ಯಾಧರ, ಅಪ್ಸರ, ಯಕ್ಷ, ಗಂಧರ್ವ, ರಕ್ಷಸ್ಸು, ನಾಗಾದಿಗಳೆಲ್ಲರೂ, ತಮ್ಮ ತಮ್ಮ ಭಾವ, ಭಾಷೆ, ರಸ, ರೂಪ, ಮುಂತಾದುವುಗಳನ್ನು ಭರತಋಷಿಗೆ ಅನುಗ್ರಹಿಸಿ, ನಟರಾಗಿ ಅಭಿನಯಿಸಿದ ಆತನ ಪುತ್ರರಿಗೆ, ವಸ್ತ್ರಾಲಂಕಾರ ಮುಂತಾದ ಪಾರಿತೋಷಕಗಳನ್ನು ಕೊಟ್ಟರು. ಹೀಗೆ ದೇವತೆಗಳಿಂದ ಪುರಸ್ಕೃತನಾದ ಭರತನು, ಆ ಬಳಿಕ ಭೂಲೋಕದಲ್ಲಿ ನಾಟ್ಯಶಾಸ್ತ್ರವನ್ನು ಪ್ರವರ್ತಿಸಿದನು, ಎಂಬುದಾಗಿ ಪ್ರತೀತಿಯಿದೆ [ಇದು ನಾಟ್ಯಶಾಸ್ತ್ರದ ಆದ್ಯ ಪ್ರವರ್ತಕನಾದ ಭರತಮುನಿಯು ವಿವರಿಸುವ ವಿಷಯ.]

ನಾಟ್ಯ-ನಾಟಕಗಳ ಪ್ರಾಚೀನತೆ:— ಋಗ್ವೇದದಲ್ಲಿರುವ "ಯಮ-ಯಮಿ ಸಂವಾದ" ಮತ್ತು "ಪುರೂರವ-ಊರ್ವಶಿಯರ ಸಂವಾದ"ಗಳೇ, ಭಾರತದಲ್ಲಿ ನಾಟಕ ಕಲ್ಪನೆಗೆ ಅಡಿಗಟ್ಟೆಂದು, ಭಾರತೀಯ ವಿದ್ವಾಂಸರ ಮತ. ಆದರೆ ಮತ್ತೆ ಕೆಲವು ಪಾಶ್ಚಾತ್ಯ ಪಂಡಿತರು, "ನಾಟ್ಯ-ನಾಟಕ" ಪದಗಳಿಗೆ ಮೂಲಭೂತ "ನಟ್" ಎಂಬುದು ಸಂಸ್ಕೃತದ್ದಲ್ಲ; "ನೃತ್" ಧಾತುವಿನ ಅಪಭ್ರಂಶ, ಪ್ರಾಕೃತದಲ್ಲಿ "ನಟ್" ಎಂದುಂಟಾಗಿ, ಅದು ಸಂಸ್ಕೃತದಲ್ಲಿ ಸೇರಿ, ಅದರಿಂದ ನಾಟ್ಯ-ನಾಟಕ ಶಬ್ದವು ನಿಷ್ಪನ್ನವಾಯಿತು" ಎಂದು ಅಭಿಪ್ರಾಯಪಡುತ್ತಾರೆ; ಆದರೆ, ಈ ಅನುಮಾನಕ್ಕೆ ಅವಕಾಶವೇ ಇಲ್ಲ. "ನಟ್" ಧಾತುವನ್ನು ಪಾಣಿನಿಯು ಧಾತು ಪಾಠದಲ್ಲಿ ಪಠಿಸಿರುವನು. ಕ್ರಿ. ಶ. ೧೫೦ ವರ್ಷಗಳ ಪೂರ್ವದಲ್ಲಿ ಆಗಿ ಹೋದ ಪತಂಜಲಿಯ ಮಹಾಭಾಷ್ಯದಲ್ಲಿ "ಕಂಸವಧ" ಇತ್ಯಾದಿ ನಾಟಕಗಳ ಉಲ್ಲೇಖವಿದೆ. ಕ್ರಿ. ಪೂ. ೩೦೦ ವರ್ಷಗಳ ಪೂರ್ವದಲ್ಲಿ ಆದ ಮಹಾಭಾರತದಲ್ಲಿ ನಾಟಕಕಾರರಿಗೆ ಯಾವ ಯಾವ ಲೋಕಗಳು ಪ್ರಾಪ್ತವಾಗುತ್ತವೆ. ಎಂಬುದನ್ನು ಬಣ್ಣಿಸುವಾಗ, ನಾಟಕದ ಉಲ್ಲೇಖವು ಬಂದಿದೆ, ಪಾಣಿನಿಯ ಕಾಲದಲ್ಲಿ ನಾಟಕಗಳ ಕಲ್ಪನೆಯು ಸಂಪೂರ್ಣ ಮೂರ್ತಾವಸ್ಥೆಗೆ ಬಂದಿತ್ತೆಂದು ತಿಳಿದುಬರುವದು. ಪಾಣಿನಿಯ ತದ್ಧಿತ ಪ್ರಕರಣದಲ್ಲಿ "ಪರಾಶರ್ಯ ಶಿಲಾಲಿ ಭ್ಯಾಂಭಿಕ್ಷು ನಟಸೂತ್ರಯೋಃ" [೪—೩—೧೧೦] "ಕರ್ಮಂದ ಕೃಶಾಶ್ವಾದಿನಿಃ" [೪—೩—೧೧೧] ಈ ಎರಡು ಸೂತ್ರಗಳಲ್ಲಿ "ಶಿಲಾಲಿ" ಮತ್ತು "ಕೃಶಾಶ್ವ" ಎಂಬ ಎರಡು ನಟಸೂತ್ರಗಳ ಉಲ್ಲೇಖವಿರುವದರಿಂದ ಆ ಕಾಲದಲ್ಲಿ ನಾಟ್ಯ--ನಾಟಕ ಕಲೆಯು ಊರ್ಜಿತಯಲ್ಲಿತ್ತೆಂದು ವ್ಯಕ್ತವಾಗುತ್ತದೆ. ಆ ಕಾಲವೆಂದರೆ ಕ್ರಿ. ಪೂ. ೮೦೦ ವರ್ಷಗಳದ್ದಾಗಿತ್ತೆಂದು, "ಭಾರತ ಇತಿಹಾಸ ಸಂಶೋಧಕ ಮಂಡಲ"ದ ೯೧೧ನೆಯ ಇಸುವಿಯ ವರದಿಯಿಂದ ತಿಳಿಯುತ್ತದೆ. ಭರತನ ನೃತ್ಯಶಾಸ್ತ್ರದ ೨೧ನೆಯ ಅಧ್ಯಾಯದಲ್ಲಿ ಶಕ, ಯವನ, ಬಾಹ್ಲಿಕ, ಮುಂತಾದ ಜನಾಂಗದವರ ವೇಷವನ್ನು ಹೇಗೆ ಧರಿಸಬೇಕೆಂಬ ವಿವರವಿದೆ. ಭಾರತದಲ್ಲಿ ಸುಸಂಬದ್ಧವಾದ, ವ್ಯವಸ್ಥಿತವಾದ ನಾಟ್ಯಶಾಸ್ತ್ರವು ಬಳಕೆಗೆ ಬಂದು, ಸುಮಾರು ೨೫೦--೩೦೦ ವರ್ಷಗಳಾದವೆಂದು ಹೇಳಲು ಅಡ್ಡಿಯೇನೂ ಇಲ್ಲ.

ಸಂಸ್ಕೃತ ನಾಟಕಗಳಲ್ಲಿ ಸಾಮಾನ್ಯವಾಗಿ, ೫ರಿಂದ ೧೦ರ ತನಕ ಅಂಕಗಳಿರುತ್ತವೆ. ಉದಾ: —ಶಾಕುಂತಲ ಅಂಕ ೭. ಉತ್ತರ ರಾಮಚರಿತೆ ಅಂಕ ೭. ವೇಣೀಸಂಹಾರ ಅಂಕ ೬. ಮುದ್ರಾರಾಕ್ಷಸ ಅಂಕ ೭. ಮೃಚ್ಛಕಟಿಕಾ ೧೦. ಹನುಮನ್ನಾಟಕ ೧೦. ಹೀಗೆ ಸಂಸ್ಕೃತದಲ್ಲಿ ೫ಕ್ಕಿಂತ ಕಡಿಮೆ ಅಂಕಗಳಿರುವ ನಾಟಕಗಳಿಲ್ಲ. ನಾಟಕದಲ್ಲಿ ಅಂಕ, ಸಂಧಿ, ವಿಷ್ಕಂಭಕ, ಪ್ರವೇಶಕ ಇತ್ಯಾದಿ ಅನುಕೂಲ್ಯಗಳ ಏರ್ಪಾಡುಗಳಿವೆ. (ಅಂಕವನ್ನು ರಚಿಸುವಾಗ, ೧ಕ್ಕಿಂತ ಹೆಚ್ಚು ದಿವಸಗಳ ವರೆಗೆ ನಡೆದಿರುವ ವಿಷಯಗಳನ್ನು ಒಂದೇ ಅಂಕದಲ್ಲಿ ತೋರಿಸಬಾರದು. ಅದಕ್ಕಾಗಿ, ಬೇರೆ ಬೇರೆ ಅಂಕಗಳನ್ನು ರಚಿಸಬೇಕು, ಇತ್ಯಾದಿ ಎಷ್ಟೋ ನಿಯಮಗಳಿವೆ) ಯಕ್ಷಗಾನ ನಾಟಕದಲ್ಲಿಯೂ, ಘಟನೆಗಳನ್ನೇ ಅಂಕವೆಂತ ಪರಿಗಣಿಸುವ ಪರಿಪಾಠವಿದೆ; ಹೊರತು ಪ್ರತ್ಯೇಕ ಮಹತ್ವದ ಅಂಕಗಳ ವಿಭಜನೆ ಇಲ್ಲ. ನಾಟಕವನ್ನು ಪ್ರಾರಂಭಿಸಬೇಕಾದರೆ ಇದರಲ್ಲಿ ಪೂರ್ವರಂಗ ಸಭಾ ಪೂಜೆ, ನಾಟಕದ ಹೆಸರು, ಕವಿಯ ಪರಿಚಯ, ನಾಂದಿ, ನಮಸ್ಕಾರ, ಆಶೀರ್ವಾದ, ದೇವ, ಬ್ರಾಹ್ಮಣ, ರಾಜ, ಮೊದಲಾದವರ ಸ್ತುತಿ—ಇದು ಸೂತ್ರಧಾರನಿಂದ ಆಚರಿಸಲ್ಪಡುವ ವಿಧಾನವಿದೆ. ಯಕ್ಷಗಾನ ಆಟದಲ್ಲಿಯೂ, ಗಣಪತಿಪೂಜೆ, ಸಭಾಲಕ್ಷಣ, ದೇವತಾ ಸ್ತುತಿ, ಸಭಾವಂದನೆ, ಹಿಂದಿನ ಕವಿಗಳ ಸ್ತುತಿ, ಆಖ್ಯಾನದ ಸೂಚನೆ, ಮುಂತಾದವುಗಳನ್ನು ಭಾಗವತರು, ಪ್ರಸ್ತಾವನೆಯಲ್ಲಿ ಮಾಡುವ ನಿಯಮವಿದೆ.

ಶಾಕುಂತಲ ನಾಟಕದಲ್ಲಿ ಸೂತ್ರಧಾರನು "ಈ ಸಭೆಯು ವಿದ್ವಾಂಸರಿಂದ ತುಂಬಿಕೊಂಡಿದೆ" ಎನ್ನುತ್ತಾನೆ. ಮಾಲವಿಕಾಗ್ನಿಮಿತ್ರ ನಾಟಕದಲ್ಲಿ "ವಿದ್ವತ್ ಪರಿಷತ್ತಿನಿಂದ ತಾನು ನಾಟಕವನ್ನಾಡಲು ಆಜ್ಞಾಪಿಸಲ್ಪಟ್ಟಿದ್ದೇನೆ" ಎಂದು ಸೂತ್ರಧಾರನು ಹೇಳುತ್ತಾನೆ. ಕಾರಣ ಭಾಸ, ಕಾಲಿದಾಸರ ನಾಟಕಗಳ ಪ್ರೇಕ್ಷಕರು ಚತುರರೂ, ವಿದ್ವಾಂಸರೂ, ಮಾರ್ಮಿಕರೂ ಆಗಿದ್ದರೆಂತ ಪರಿಸ್ಫುಟವಾಗುತ್ತದೆ; ಆದುದರಿಂದ ಜಗದ್ವಿಖ್ಯಾತ ಕವಿಗಳೇ ಸರ್ವಮಾನ್ಯರಾದ ಸಾಮಾಜಿಕರಿಗೆ ಒಪ್ಪುವ, ವಿದ್ವತ್ಪೂರ್ಣವಾದ, ಕೇಳಲಿಕ್ಕೂ, ನೋಡಲಿಕ್ಕೂ ಸುಂದರತಮವಾದ, ಸುಶ್ರಾವ್ಯವಾದ "ಕಾವ್ಯೇಷು ನಾಟಕಂ ರಮ್ಯಂ" ಪ್ರಶಸ್ತಿಗೆ ಪಾತ್ರತೆಯುಳ್ಳ ನಾಟಕಗಳನ್ನು ಬರೆಯುತ್ತಿದ್ದರು. ಉತ್ಕೃಷ್ಟವಾದ ನಾಟಕ, ಉತ್ತಮ

ನಟ-ನಟಿಯರು ಸಿದ್ಧರಾಗಬೇಕಾದರೆ ಸರ್ವಮಾನ್ಯವಾದ ಸಮಾಜವಿರಲೇಬೇಕು.

ದೃಶ್ಯಕಾವ್ಯಗಳಾದ ನಾಟಕಗಳಲ್ಲಿ ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾ ಮೃಗಗಳೆಂಬ ದಶರೂಪಕಗಳಿವೆ. ಇದಲ್ಲದೆ ನಾಟಿಕೆ, ತ್ರೋಟಕ, ಗೋಷ್ಠಿ, ಇತ್ಯಾದಿ ೧೮ ಉಪರೂಪಕಗಳು ಇವೆ. ಇವುಗಳಲ್ಲಿ ಪ್ರಕರಣ ಎಂಬುದೇ ಯಕ್ಷಗಾನವಾಗಿರಬೇಕೆಂದು ೯ನೆಯ ಶತಮಾನದ ಕವಿರಾಜಮಾರ್ಗಕಾರನಿಗಿಂತಲೂ ಹಿಂದೆಯೇ ಕನ್ನಡ ಜನಪದಗಳಲ್ಲಿ "ಪಾಳ್ಪಗರಣ"ವೆಂಬುದೇ ಯಕ್ಷಗಾನವೆಂದು ಪ್ರಸಿದ್ಧವಾಗಿತ್ತು" ಎಂಬುದು, ವಿದ್ವಾನ್ ಕೆ. ಪಿ. ವೆಂಕಪ್ಪ ಶೆಟ್ಟರು, ಪಾಣಾಜೆ, ದ. ಕ. ಅವರ ಮಾತಿನಿಂದ ಅಭಿವ್ಯಕ್ತವಾಗುತ್ತದಲ್ಲದ "ಕರ್ನಾಟಕ ಕವಿಚೂತವನ ಚೈತ್ರ"ನೆಂದು ಖ್ಯಾತಿವೆತ್ತ ಪಂಪನ ಕಾವ್ಯದಲ್ಲೂ "ಪಗರಣದರಸು" ಎಂದು ಉದ್ಧರಿಸಲ್ಪಟ್ಟದ್ದರಿಂದ ಶೆಟ್ಟರ ಮಾತಿಗ ಯಾವ ಶಂಕೆಯೂ ಇಲ್ಲವೇ ಇಲ್ಲ.

ಶಾಸ್ತ್ರೀಯ ಸಂಗೀತ-ಸಾಹಿತ್ಯಗಳಲ್ಲಿ ದಕ್ಷಿಣ-ಉತ್ತರಗಳೆಂಬ ವಿಧಾನಗಳಿದ್ದಂತೆ, ಕಾವ್ಯಗಳಲ್ಲಿಯೂ ಗೌಡಿ, ವೈದರ್ಭಿ, ಪಾಂಚಾಲಿಗಳೆಂಬ ಭೇದಗಳಿವೆ. ದೇಸಿಯಲ್ಲಂತೂ "ತಿಣಿಕಿದನು ಫಣಿರಾಯ" ಎನ್ನುವಷ್ಟು ಭೇದಗಳಿವೆ. ಯಕ್ಷಗಾನ, ಕಿನ್ನರಗಾನ, ಗಂಧರ್ವಗಾನ ಈ ಬಗೆಯಾಗಿ ಎಷ್ಟೋ ಒಳಭೇದಗಳು ಸಂಗೀತದಲ್ಲಿವೆ. "ಗೀತಂ, ವಾದ್ಯಂ, ತಥಾ ನೃತ್ಯಂ ತ್ರಯಂ ಸಂಗೀತ ಮುಚ್ಯತೇ" ಎಂಬ ಪ್ರಮಾಣಕ್ಕನುಸಾರವಾಗಿ, "ಸಂಗೀತ ನಾಟಕ" ಎನ್ನುವಂತೆ ಯಕ್ಷಗಾನ ಆಟವೂ ಗೀತ, ವಾದ್ಯ, ನೃತ್ಯಗಳಿಂದ ಕೂಡಿದ ಪದ್ಯನಾಟಕವಾದುದರಿಂದ ಇದಕ್ಕೂ "ಯಕ್ಷಗಾನ ನಾಟಕ" ಎಂದು ಸಂಬೋಧಿಸಲು ಏನೂ ಅಡ್ಡಿಯಿಲ್ಲ.

ಸಂಗೀತ ನಾಟಕಗಳಲ್ಲಿ ಪ್ರಬಂಧ, ನೇಪಥ್ಯ, ನಾಂದಿ, ಸೂತ್ರಧಾರ, ದೇವತಾ ಪ್ರಾರ್ಥನೆ, ರಂಗಪೂಜೆಗಳಿರುವಂತೆ ಯಕ್ಷಗಾನ ನಾಟಕದಲ್ಲಿಯೂ ವೇಷಕಟ್ಟುವ ಚೌಕ, ಸೂತ್ರಧಾರನೂ ಹಾಡುಗಾರನೂ ಆದ ಭಾಗವತ, ಮೃದಂಗ, ಚಂಡೆಗಳ ವಾದನ, ಜಾಗಂಟೆ, ತಾಳ, ಶ್ರುತಿ, ಗಣಪತಿಪೂಜೆ, ಸಭಾಪೂಜೆ, ಕೋಡಂಗಿಗಳೆಂಬ ಯಕ್ಷಹಾಸ್ಯಗಾರರು, ಯಕ್ಷಿಣೀ ನರ್ತನವೆಂಬ ಸ್ತ್ರೀವೇಷದ ನಾಟ್ಯ, ಪೂರ್ವರಂಗದಲ್ಲಿ ನಿತ್ಯವಾಗಿವೆ. ಉತ್ತರ-ರಂಗ

ದಲ್ಲಿ ಕಥಾವಸ್ತುವಿನ ನೈಮಿತ್ತಿಕ ಒಡ್ಡೋಲಗ, ಪೀಠಿಕೆ ನಾಯಕ, ಪ್ರತಿನಾಯಕಾದಿ ಪಾತ್ರವರ್ಗಗಳೂ, ಸಂಗೀತ-ನಾಟಕದಲ್ಲಿಯಂತೆಯೇ ಇವೆ. ಹಿನ್ನೆಲೆಯಿಲ್ಲದೆ, ದೃಶ್ಯಗಳಿಲ್ಲದೆ, ಕೇವಲ ಕುಣಿತ, ವಾದನ, ಗಾಯನ, ಅರ್ಭಟ, ಅಭಿನಯಗಳಿಂದಲೇ ಗಿರಿ, ವನ, ಮೃಗಬೇಟೆಗಳನ್ನೂ, ಯುದ್ಧ, ಕ್ರೀಡೆ, ಮುಂತಾದುವುಗಳನ್ನೂ ತೋರಿಸಿ, ಪ್ರೇಕ್ಷಕರನ್ನು ರಸತರಂಗಿಣಿಯಲ್ಲಿ ತೇಲಿಸುವ ಸಾಮರ್ಥ್ಯ, ವೈವಿಧ್ಯ, ವೈಶಿಷ್ಟ್ಯಗಳು, ಪ್ರತಿ ಪದ್ಯಗಳ ತಾಳಗತಿಯನ್ನನುಸರಿಸಿ, ಭಾವಪೂರ್ಣವಾಗಿ ಕುಣಿಯುವ ನಾಟ್ಯವಿಶೇಷ, ಇವು, ಯಾವ ಸಂಗೀತ ನಾಟಕಗಳಲ್ಲಿಯೂ ಅಲಭ್ಯವಾದ ಭೂತನಾಟ್ಯ, ಸಿಂಹನಾಟ್ಯ, ಪ್ರೇತನಾಟ್ಯಗಳು, ಯಕ್ಷಗಾನನಾಟಕರಂಗಕ್ಕೇ ಮೀಸಲಾಗಿವೆ.

ಮಾರ್ಗನಾಟಕಗಳಲ್ಲಿ ಲಕ್ಷಣಬದ್ಧವಾಗಿರುವ ಕಥಾವಸ್ತು (ಪೌರಾಣಿಕ) ಅಂಕಾವತಾರ, ಅರ್ಥಪ್ರಕೃತಿಯ ಬೀಜ, ಬಿಂದು, ಪತಾಕ, ಪ್ರಕರಿ, ಕಥಾ ಪರಿಣಾಮಗಳೆಂಬ ಅವಸ್ಥೆಗಳೂ; ಪ್ರಕಾಶ, ಸ್ವಗತ, ಜನಾಂತಿಕ ಮಾತುಗಳೂ; ಆರಂಭ ಯತ್ನ ಪ್ರಾಪ್ತ್ಯಾಶೆ, ನಿಯತಾಪ್ತಿ, ಫಲಾಗಮಗಳೆಂಬ ನಾಯಕನ ಕಾರ್ಯದೃಷ್ಟಿಯ ಅವಸ್ಥೆಗಳೂ; ಧೀರೋದಾತ್ತ, ಧೀರಲಲಿತ ಧೀರೋದ್ಧತ,ಧೀರ ಪ್ರಶಾಂತವೆಂಬ ನಾಯಕ ಭೇದಗಳೂ; ಮತ್ತು ಪ್ರಬಂಧಗಳಲ್ಲಿ ವಿಂಗಡಿಸಿ ವರ್ಗೀಕರಣ ಮಾಡದಿದ್ದರೂ—ಮುಖ, ಪ್ರತಿಮುಖ, ಗರ್ಭ, ಅವಮರ್ಶ, ಉಪಸಂಹೃತಿಗಳೆಂಬ ಸಂಧಿವಿಭಾಗಗಳೂ; ಯಕ್ಷಗಾನ ನಾಟಕದಲ್ಲಿವೆ. ಸಂಪೂರ್ಣವಲ್ಲದಿದ್ದರೂ, ಜಾನಪದ ಕಲೆಯ ಶಿರೋಮಣಿಗೆ ಬೇಕಾಗುವಷ್ಟು ನಾಟಕ ಲಕ್ಷಣಗಳು ಯಕ್ಷಗಾನ ನಾಟಕದಲ್ಲಿವೆ. ಮಹೋನ್ನತ ಕೃತಿಗಳಲ್ಲವಾದರೂ, ದೇಸಿಯಲ್ಲಿ ಇದಕ್ಕೆ ನಾಟಕದ ಸ್ಥಾನವಿದೆ. ಕೇವಲ ಪದ್ಯಮಯವಾದ ಕೃತಿಗಳು, ನಾಟಕದ ಸಮಾನಸ್ಥಾನವನ್ನಲಂಕರಿಸಬಲ್ಲ ಯಕ್ಷಗಾನ ನಾಟಕಗಳು, ಮುದ್ದಣ, ಸುಬ್ಬರ ಕೃತಿಗಳು, ಶಾಂತಪ್ಪನ ಕೃತಿಗಳು ಅಜರಾಮರವಾಗಿರಬಲ್ಲವು.

ಗಾನದ ಜೊತೆಗಿರುವ ವಾದ್ಯ, ನೃತ್ಯ ಇವು ಎರಡು. ಅಂತೂ ಮೂರು ಸೇರಿ ಕಥಾ ವಿಶೇಷವು ಯಾವ ರಂಗದಲ್ಲಿ ಅಭಿನಯಿಸಲ್ಪಡುವದೋ ಅದು ನಾಟಕವೆಂದು ಕರೆಯಲ್ಪಡುತ್ತದೆ. ವಾದ್ಯ, ನೃತ್ಯಗಳೊಂದಿಗೆ ಯಕ್ಷಗಾನ ಸೇರಿ ಕಥಾವಸ್ತು ಅಭಿನಯಿಸಲ್ಪಡುವದರಿಂದ ಯಕ್ಷಗಾನ ನಾಟಕ ಅಥವಾ ಯಕ್ಷನಾಟಕ (ದಶಾವತಾರಗಳುಳ್ಳ ಪ್ರಖ್ಯಾತ ಪೌರಾಣಿಕ ಕಥೆಗಳನ್ನು

ಅಭಿನಯಿಸಿ ತೋರಿಸುವ ಆಟ) ಸಂಗೀತ ನಾಟಕಕ್ಕೆ ಪೂರ್ವರಂಗವಿರುವಂತೆ (ಈಗಿನ ನವೀನ ನಾಟಕಗಳಲ್ಲಿಲ್ಲ.) ಇದರಲ್ಲಿಯೂ ಸಭಾಲಕ್ಷಣವೆಂಬ ಭಾಗವಿದೆ.

ನಾಯಕ, ಕಾರ್ಯಾದಿ ಘಟನೆಗಳಿಗನುಸರಿಸಿ, "ವಿಲಾಸ, ವಿನ್ಯಾಸ, ಕ್ರಮೋ ವೃತ್ತಿಃ" ಎಂಬುದಾಗಿ ಕಾವ್ಯಮೀಮಾಂಸದ ಸಿದ್ಧಾಂತವಿದೆ. ಈ ವ್ಯಾಪಾರಕ್ಕೆ: ೧. ಕೈಶಿಕೀ (ಗೀತೆ, ನೃತ್ಯ, ವಿಲಾಸಾದಿ ಶೃಂಗಾರ ಚೇಷ್ಟೆಗಳನ್ನೊಂದಿದ್ದು). ೨ ಸಾತ್ವತಿ (ಸತ್ವ, ಶೌರ್ಯ, ತ್ಯಾಗ, ದಯೆ, ಹರ್ಷ ಮುಂತಾದವುಗಳಿಂದ ಕೂಡಿ ಜಯಶೀಲವಾಗಿರುವದು. ೩. ಆರ್ಭಟಿ (ಮಾಯೆ, ಇಂದ್ರಜಾಲ, ಜಗಳ, ಕೋಪ, ಕಳವಳಗಳಿಂದ ಕೂಡಿರುವದು). ೪. ಭಾರತಿ (ವೃತ್ತಿ, ಘಟನೆಗಳ ಸ್ವಭಾವದ ಮೇಲೆ ಸಿದ್ಧವಾಗಿರದೆ, ನಟರು ಆಡುವ ಮಾತಿನ ವೈಚಿತ್ರ್ಯ, ವಿಶೇಷವನ್ನು ಸೂಚಿಸುವದು) ಎಂದು ಹೆಸರುಗಳಿವೆ. ಈ ೪ ವಿಧವಾದ ವೃತ್ತಿಗಳೂ ಯಕ್ಷನಾಟಕದಲ್ಲಿ ಬೆರೆತು ಕೊಂಡಿರುವದು ವಾದವಿಲ್ಲದ ವಿಷಯವಾದುದರಿಂದ ವೃತ್ತಿಯಿಂದಲೂ ಯಕ್ಷಗಾನ ಆಟವು ನಾಟಕವೆಂಬ ಹೆಸರಿಗೆ ಅರ್ಹತೆಯುಳ್ಳದ್ದಾಗಿದೆ.

ಇನ್ನೊಂದು ಬಗೆಯಿಂದ ಯಕ್ಷಗಾನವು "ಕಾವ್ಯ ನಾಟಕ"ವೆಂತಲೂ, "ಶ್ರಾವ್ಯ ನಾಟಕ"ವೆಂತಲೂ ಅನ್ನುವದು ಉಚಿತವೇ ಆದೀತು. ಕೇವಲ ಯಕ್ಷಗಾನ ಪದ್ಯಗಳ ಆಧಾರದಿಂದ ಸ್ವಕಪೋಲ ಕಲ್ಪನೆಯಿಂದ ಮಾತುಗಳನ್ನಾಡಿ, ಕೇಳುವವರ ಚಿತ್ತಭಿತ್ತಿಯಲ್ಲಿ ಪುರಾಣಕಾಲದ ಚಿತ್ರವನ್ನು ಚಿತ್ರಿಸುವದು, ಪ್ರತಿಭೆಯ ಪ್ರತೀಕವೇ ಸೈ. ಪೂರ್ವಲಿಖಿತ, ಪೂರ್ವಕಲ್ಪಿತ ಮಾತುಗಳೇನೂ ಇರುವದಿಲ್ಲ. ಆದುದರಿಂದ ಯಕ್ಷಗಾನದ ತಾಳಮದ್ದಳೆಯಾಗಲೀ, ರಂಗಸ್ಥಳದಲ್ಲಿ ಅಭಿನಯಿಸಲ್ಪಡುವ ಆಟವಾಗಲೀ "ಆಶು ನಾಟಕ" ಎನ್ನಿಸಿಕೊಳ್ಳುವದು ಉಚಿತವೇ ಸರಿ. "ಕಲೆ, ಕಾವ್ಯಗಳ ಮಿಲನವೇ ನಾಟಕ" ಎಂಬ ವಿದ್ವಾಂಸರ ಮತಕ್ಕೆ ಒಪ್ಪುವದಿದ್ದರೂ ಸಹ, ನಾಟ್ಯ ಭಾವಪೂರ್ಣವಾದ ಯಕ್ಷಗಾನ ಪದಗಳು, ಅವಕ್ಕೆ ಕಲಾಪೂರ್ಣವಾದ ಮಾತುಗಳು, ಮನೋಹರವಾದ ವೇಷ-ಭೂಷಣ ಇವುಗಳ ಮಧುರ ಕಲಾ ಸಮುಚ್ಚಯವು ಯಕ್ಷಗಾನ ಆಟವಾದುದರಿಂದ, ಯಾವ ಅಡ್ಡಿಯೂ ಇಲ್ಲದೆ "ಯಕ್ಷಗಾನ ನಾಟಕ"ವೆಂದು ಕರೆಯಬಹುದು.

ಲೋಕದ ಜನತೆಯಲ್ಲಿ ಉಚ್ಚ-ನೀಚ, ತರ-ತಮ ಮೊದಲಾದ ದ್ವಂದ್ವಗಳಿರುವಂತೆ, ಗಾನ, ನಾಟಕ, ವಾದನ, ನಾಟ್ಯರೀತಿ, ಮಾಧುರ್ಯ, ಶೃಂಗಾರಾದಿ ರಸಗಳಲ್ಲಿಯೂ ವಿಭಿನ್ನತೆಗಳಿವೆ.

ಕೇವಲ ಶೃಂಗಾರರಸ ಪ್ರಧಾನವಾದ ಶಾಸ್ತ್ರೀಯ ಲಕ್ಷಣದ ಗಾನ, ವಾದನ, ನಾಟ್ಯಗಳುಳ್ಳ ಸಾತ್ವಿಕ ಪ್ರಧಾನವಾದ ಗಾನವು ದೇವ ಗಾನವು.

ಇದಕ್ಕಿಂತ ಕೆಳತರಗತಿಯ ಸಾತ್ವಿಕ, ರಾಜಸ ಮಿಶ್ರವಾದ ಗಾನವು ಗಂಧರ್ವಗಾನ. ಇದರಲ್ಲಿ ವೀರ, ಶೃಂಗಾರಗಳ ಸಮ್ಮಿಲನವಿದೆ.

ಇದಕ್ಕಿಂತಲೂ ಭಿನ್ನವಾದ ಸಾತ್ವಿಕ, ರಾಜಸ, ತಾಮಸ ಮಿಶ್ರಗಳಿದ್ದು, ವೀರರಸಪ್ರಧಾನವಾದದ್ದು ಯಕ್ಷಗಾನವಿದೆ. ಕಿನ್ನರ, ಕಿಂಪುರುಷ ಗಾನಗಳೂ ಇದರಲ್ಲಿ ಮಿಶ್ರವಾಗಿವೆ.

ದೇವ, ಗಂಧರ್ವ, ಯಕ್ಷಗಾನಗಳಲ್ಲಿ ನವರಸಗಳು ತುಂಬಿವೆ. ಆದರೆ ಪ್ರಧಾನವಾಗಿ ಮೇಲೆ ವಿವರಿಸಿದಂತಿವೆ. ಈ ಗಾನಗಳೇ ಸ್ವನಾಮಪ್ರಸಿದ್ಧಿಯ ನಾಟಕಗಳಾಗಿವೆ. ನಾಟಕಗಳು ಲೋಕಶಿಕ್ಷಣದ ಪಾಠಶಾಲೆಗಳಾಗಿವೆ. ಭರತ ನಾಟ್ಯದಲ್ಲಿ ಭೂತನಾಟ್ಯ ಯಕ್ಷನಾಟ್ಯವು ಸಮಾವೇಶಗೊಂಡಿರುತ್ತದೆ.

ಉತ್ತರಕಾಂಡದ ರಾಮಾಯಣದ ಪ್ರಕಾರ— ಲಂಕೆಯಿಂದ ರಾವಣನು ಓಡಿಸಿದ ಕುಬೇರನ ಅನುಚರರಾದ ಯಕ್ಷರು, ಕಾಡುಮೇಡುಗಳಲ್ಲಿ ವಾಸಿಸಿ ನಾಡನ್ನು ಸಂಚರಿಸುತ್ತಾ ಇರುವಾಗ, ನಾಡಿನ ನಿವಾಸಿಗಳಿಗೆ ಯಕ್ಷಬಂಧುಗಳ ಪರಿಚಯವಾಗಿ, ಕೇವಲ ದೇಸಿಯಾಗಿದ್ದ ಗಾನ, ನರ್ತನ ಕಲೆಗಳನ್ನು ತಿದ್ದಿಕೊಂಡರು; ಸಾಧ್ಯವಿದ್ದಷ್ಟು ಸುಸ್ವರೂಪ ಕೊಟ್ಟರು. ಮೂಲತಃ ತಿವದಿ, ಚತ್ತಾಣ, ಬೆದಂಡೆಗಳಲ್ಲಿರುವ ಕೆಲವು ದೇಸಿ ಹಾಡುಗಳು ಪ್ರತಿಯೊಂದು ದ್ರಾವಿಡ ಭಾಷೆಯಲ್ಲೂ ಇದ್ದವು. ದೇಸಿಯಾದ ಕುಣಿತಗಳೂ ಇದ್ದವು. ಕೆಲವು ಖಂಡ ಕಾವ್ಯಗಳ ಪದ್ಯಗಳೂ ಇದ್ದು, ಬೊಂಬೆಯಾಟ, ಮೂಕನಾಟ್ಯಗಳಾಗಿ, ಒಂದೊಂದು ಬಗೆಯ ಆಟಗಳನ್ನು ಆಡುತ್ತಾ, ಈಗಿನ ಸಭಾಲಕ್ಷಣವೆಂಬ ಪೂರ್ವರಂಗಕ್ಕೆ ದಾರಿಯನ್ನು ಕಲ್ಪಿಸಿಕೊಟ್ಟಿದ್ದವು. ಹಿಂದಿನ ಪುರಾಣ-ಸಾಹಿತ್ಯಗಳಲ್ಲೂ ಈ ಬಗ್ಗೆ ಸಾಕಷ್ಟು, ಉಲ್ಲೇಖಗಳಿವೆ. ವಜ್ರನಾಭನೆಂಬ ರಕ್ಕಸರಾಜನ ನಗರಿಗೆ ಯಾದವ ರಾಜಮಕ್ಕಳು ಆಟದ

ಮೇಳವನ್ನು ಕಟ್ಟಿಕೊಂಡು ಹೋಗಿ, ಅಲ್ಲಿ "ರಂಭಾಮಾನಲುಂಡನಂ" ಎಂಬ ಆಖ್ಯಾನನನ್ನು ಆಡಿದ್ದೂ ಪುರಾಣಪ್ರತೀತವಾಗಿಯೇ ಇದೆ.

೧೬ನೆಯ ಶತಮಾನದಲ್ಲಿಯೇ ಕರ್ನಾಟಕವು ಯಕ್ಷಗಾನದ "ಆಡುಂಬೊಲ"ವಾಗಿತ್ತು ಎಂಬುದು ವಿಜಯನಗರದ ಇತಿಹಾಸವನ್ನು ಅವಲೋಕಿಸಿದರೆ ಅರ್ಥವಾಗುವಂತಿದೆ; ಇದಕ್ಕೂ ಪೂರ್ವದಲ್ಲಿ ತಮಿಳುನಾಡು, ಕೇರಳಗಳಲ್ಲಿ ಕಥಕ್ಕಳಿಯ ಮೂಲಕ ಪ್ರಚಾರಕ್ಕೆ ಬಂದು, ೧೮ನೆಯ ಶತಮಾನದ ಆದಿಯಲ್ಲಿ "ಯಕ್ಷಗಾನ ಕವಿ ಚೂತವನಚೈತ್ರ"ನಾದ ಪಾರ್ತಿಸುಬ್ಬನಿಂದ (ಬೆನಕಯ್ಯ ಭಾಗವತರು ಸುಬ್ಬನಿಗಿಂತ ಹಿಂದೆಯೇ "ಸಭಾಲಕ್ಷಣ"ವನ್ನು ರಚಿಸಿದ್ದರೆಂತ ಮುಳಿಯ ತಿಮ್ಮಪ್ಪಯ್ಯನವರ ಅಭಿಪ್ರಾಯ.) ಕನ್ನಡಕ್ಕೆ ಪರಿವರ್ತಿತವಾಗಿ, ಕನ್ನಡಿಗರಿಗೊಂದು ಜನಪದ ಕ್ರೀಡಾಂಗಣ ರಚಿತವಾಯಿತು. ಈತಸಿಂದ ರಚಿತವಾದ 'ಸಭಾಲಕ್ಷಣ'ದಲ್ಲಿ "ರಾಜಾನಃಪೃಥ್ವೀರೂಪೇಣ" "ವಿದ್ವಾಂಸಃ ಕವಯೋ ಭಟ್ಟಾ ಗಾಯಕಾಃ ಪರಿಹಾಸಕಾಃ" "ವಾಮಭಾಗೇ ಮೃದಂಗೀಚ" ಇತ್ಯಾದಿ ಶ್ಲೋಕಗಳೆಲ್ಲಾ, ಸಂಸ್ಕೃತದ ಲಾಕ್ಷಣಿಕ ಅನುಕರಣಗಳಾಗಿದ್ದು ಯಕ್ಷಗಾನಕ್ಕೆ ಉಚ್ಚತಮ ಸ್ಥಾನವನ್ನು ಕಲ್ಪಿಸಿಕೊಟ್ಟಿವೆ. ಇವೆಲ್ಲಾ ಸಂಸ್ಕೃತ ಸಾಹಿತ್ಯದ ನುಡಿಗಟ್ಟುಗಳಾಗಿವೆ.

ಇನ್ನು ನಮ್ಮ ಕನ್ನಡದ್ದೇ ಆದ ಪುರಾತನ ಸೊತ್ತಿದೆಯೇ ಎಂಬುದನ್ನು ಅವಲೋಕಿಸೋಣ. ೧೭ನೆಯ ಶತಕದಲ್ಲಿ ಸಿಂಗರಾರ್ಯ ವಿರಚಿತ "ಮಿತ್ರಾವಿಂದಾ ಗೋವಿಂದ" ಎಂಬುದೇ ಕನ್ನಡದಲ್ಲಿ ಉಪಲಬ್ಧವಾದ ಪ್ರಪ್ರಥಮ ನಾಟಕ. ತಂಜಾವೂರಿನ ರಾಜನಾಗಿದ್ದ ಅಚ್ಯುತನಾಯಕನ ಮಗ ರಘುನಾಥ ನಾಯಕನೆಂಬ ಕನ್ನಡಿಗನು, "ಪಾರಿಜಾತ ಹರಣ, ವಾಲ್ಮೀಕಿ ಚರಿತೆ, ಅಚ್ಯುತೇಂದ್ರಾಭ್ಯುದಯ, ಗಜೇಂದ್ರ ಮೋಕ್ಷ, ನಳಚರಿತೆ, ರುಕ್ಮಿಣೀ ಕೃಷ್ಣ ವಿವಾಹ" ಮುಂತಾದ ಯಕ್ಷಗಾನ ಪ್ರಬಂಧಗಳನ್ನು ೧೬ನೆಯ ಶತಮಾನದಲ್ಲಿ ವಿರಚಿಸಿದ್ದಾನೆಂದು ಗೋವಿಂದ ದೀಕ್ಷಿತನ ಸಾಹಿತ್ಯ ಸುಧೆಯಿಂದ ತಿಳಿದುಬರುತ್ತದೆ; ಕಾರಣ ಕನ್ನಡದ ಸಂಗೀತ ನಾಟಕಗಳಿಗೆ ಯಕ್ಷಗಾನ ನಾಟಕಗಳು ಮಾರ್ಗದರ್ಶನ ಮಾಡಿವೆಯೆಂಬುದು ತಾನೇ ಸಿದ್ಧವಾದಂತಾಯಿತು. ಡಾ| ಕೆ. ಎಂ. ಕೃಷ್ಣರಾವ್ ಅವರ ಅಭಿಪ್ರಾಯದಂತ ೧೭ನೆಯ ಶತಕದಲ್ಲಿಯೇ ಕೃಷ್ಣಗಿರಿ ಕೃಷ್ಣಯ್ಯ ಮತ್ತು ವಿಮಲಾನಂದ ಎಂಬಿಬ್ಬರು ಕ್ರಮವಾಗಿ "ಲಕ್ಷ್ಮಣವಿಲಾಸ" ಮತ್ತು "ಕೃಷ್ಣ-ಅರ್ಜುನ

ನರ ಕಾಳಗ" ಎಂಬ ಯಕ್ಷಗಾನ ಕಾವ್ಯಗಳನ್ನು ಬರೆದಿದ್ದಾರಾಗಿ ತಿಳಿಯುತ್ತದೆ. ಆರ್ಯ-ದ್ರಾವಿಡ ಸಂಸ್ಕೃತಿಗಳು, ಸಮ್ಮಿಲನವಾಗುವ ಮೊದಲು, ಉತ್ತರ-ದಕ್ಷಿಣ ಪಥಗಳಲ್ಲಿದ್ದ, ಮೂಲನಿವಾಸಿಗಳಾದ ದ್ರಾವಿಡ ಸಮಾಜದವರು, ಜಾನಪದ-ಕಲಾಪರಿಣತರಾಗಿದ್ದರೆಂದು ಐತಿಹಾಸಿಕ ಸಂಶೋಧನೆಗಳಿಂದ ಗೊತ್ತಾಗುವಂತಿದೆ. ರಾಜಪುತ್ರಸ್ಥಾನದ ಭಿಲ್ಲರು, ಸಂದಾರಪುರ, ಧಾರಾಸೈಲಾನ, ರತಲಾಮು, ಇಂದೋರ, ಝಾಬುವಾ, ಅಲೀರಾಜಪುರ, ಜೋಬಟ ಮುಂತಾದ ಸ್ಥಳಗಳ, ಕಲ್ಲು, ಬಂಡೆ, ಏರು, ತಗ್ಗುಗಳಿಂದ ನಿಬಿಡವಾದ ಕಾಡು— ಬೆಟ್ಟಗಳಲ್ಲಿ ನೆಲೆಸಿ, ದಾರಿದ್ರ್ಯವನ್ನು ಅನುಭವಿಸುತ್ತಿರುವ ಈ ವರ್ಗದವರು, ಇನ್ನೂ ಅಶಿಕ್ಷಿತರಾಗಿಯೇ ಇದ್ದರೂ, ಪೂರ್ವಾಚಾರದಂತೆ ನಡೆವವರು, ಪ್ರಾಮಾಣಿಕರು, ಧೈರ್ಯಶಾಲಿಗಳು. ಮೊಗಲರ, ಮಹಮ್ಮದೀಯರ, ವಿರುದ್ಧ ಎದೆಗೊಟ್ಟು ಮೃತ್ಯುವಿನ ಮಡಿಲಲ್ಲಿ ಬೀಳಲೂ ಅಂಜದೆ, ದೇಶದ, ಸ್ತ್ರೀಯರ ಮಾನರಕ್ಷಣೆ ಮಾಡಿದವರು, ಬೇಟೆಯಲ್ಲಿ ಅಮೋಘ ಶೂರರು. ಇವರು ಜನಪದ ನಾಟ್ಯ— ಸಂಗೀತಗಳಲ್ಲಿ ತುಂಬಾ ಚತುರರಿರುತ್ತಾರೆ. ಭಾರತದ ಈಶಾನ್ಯ ಗಡಿಯ ಬ್ರಹ್ಮಪುತ್ರಾ ನದಿಯ ಸೀಮೆಯಲ್ಲಿರುವ ನಾಗಜಾತಿಯವರು, ನೀಲಗಿರಿಯ ತೂದವರು, ಛೋಟಾ ನಾಗಪುರದ ಪೀಠಭೂಮಿಯಲ್ಲಿರುವ ಸಾಂತಾಳರು, ದ್ರಾವಿಡ ಜನಾಂಗಕ್ಕೆ ಸೇರಿದ ಮೂಲನಿವಾಸಿಗಳು, ನಾಟ್ಯಕಲೆಯಲ್ಲಿ, ಹಾಡುಗಾರಿಕೆಯಲ್ಲಿ ನಿಪುಣರಿದ್ದಾರೆ. ಇವೆಲ್ಲ ದ್ರಾವಿಡ ಮೂಲವಾದ ನಾಟ್ಯ, ಸಂಗೀತಗಳಾಗಿವೆ; ಕಾರಣ ಚಾಕ್ಷುಷ ಲಿಪಿಜ್ಞಾನವಾಗುವ ಮೊದಲೇ, ಶ್ರಾವಣವಾದ ಜಾನಪದ ಗೀತ, ನಾಟ್ಯಗಳು ಭಾರತದಲ್ಲಿ ಅಸ್ತಿತ್ವದಲ್ಲಿದ್ದವೆಂದು ಅನ್ನಲು ಯಾವ ಅಡ್ಡಿಯೂ ಇಲ್ಲ. ಇವುಗಳಲ್ಲಿ ಯಕ್ಷಗಾನ ನಾಟ್ಯವೂ ಗಣನೀಯವಾದದ್ದು.

"ಆರ್ಯ ಸಾಹಿತ್ಯ ಗ್ರಂಥಗಳಲ್ಲಿ ಅತಿ ಪುರಾತನವಾದ ಋಗ್ವೇದ [ಋ.೯-೬೭-೩೦] ಯಜುರ್ವೇದ,ಅಥರ್ವಣವೇದಗಳಲ್ಲಿ ಕನ್ನಡ ಶಬ್ದಗಳಿವೆ" ಎಂದು ಶೋಧಕರು ದೃಷ್ಟಾಂತ ಕೊಟ್ಟು ಉದಾಹರಿಸಿರುವರು. ಕ್ರಿ. ಶ. ೨ನೆಯ ಶತಮಾನದ "ಆರ್ಕ್ಸಿರಿಂಕಸ್'' ಎಂಬ ಗ್ರೀಕ ನಾಟಕದಲ್ಲಿ ಒಂದು ಭಾಗವು ಕನ್ನಡದಲ್ಲಿದ್ದಂತೆ ಈಗ ಪ್ರಕಟವಾಗಿದೆ. ಇದು ಜಾನಪದ ನಾಟಕದ ಪ್ರಯೋಗವಾಗಿರುತ್ತದೆ.

ಪುರಾತನ ನಗರವಾದ "ಮೊಹೆಂಜೊದಾರೊ"ದಲ್ಲಿ ಭೂಗರ್ಭ ಶೋಧನೆಯಿಂದ ದೊರೆತ ಶಾಸನ-ಮುದ್ರೆಗಳಿಂದ ಇವರಲ್ಲಿರುವ ಭಾಷೆಗಳು, ದಕ್ಷಿಣ ಭಾರತದ ಭಾಷೆಗಳಿಗೆ ತಾಯ್ನುಡಿಯಂತಿದ್ದು, ಕನ್ನಡಕ್ಕೆ ಅತೀವ ಸಮೀಪದ ಭಾಷೆಯಾಗಿದೆ. ಈ ಶೋಧನೆಯ ಮುದ್ರೆ, ಶಾಸನಗಳು, ೪—೬—೮ ಸಾವಿರ ವರ್ಷಗಳ ಹಿಂದಿನದೆಂದು, ಪರಿಶೋಧಕರಲ್ಲಿ ಭಿನ್ನ ಮತಗಳಿದ್ದರೂ, ೪ ಸಾವಿರಕ್ಕಿಂತ ಕೆಳಗಿನದೆಂದು ಯಾರೂ ಅಭಿಪ್ರಾಯ ಪಡಲಿಲ್ಲ. ಆ ಶಾಸನಗಳ ಪ್ರತಿಗಳು ಪ್ರಕಾಶಗೊಂಡಿದ್ದು, ಅದರಲ್ಲಿ ಈ ಕನ್ನಡದ ಛಾವಣಿಯ ಹಾಡಿದೆ. ಇದರಿಂದ ಕನ್ನಡವು ವೇದಕಾಲದಲ್ಲಿಯೇ ಇದ್ದ ಭಾಷೆಯೆಂಬುದೂ, ಆಗಲೇ ಗೀತ ನಾಟಕಾದಿಗಳು ಕನ್ನಡದಲ್ಲಿ ಇದ್ದವೆಂಬುದೂ ಪರಿಸ್ಫುಟವಾಗುತ್ತದೆ.

ಇವೆಲ್ಲಕ್ಕಿಂತಲೂ ಅಧಿಕ ಲಕ್ಷ್ಯ ಪೂರೈಸಬೇಕಾದಂಥ ಕಾವ್ಯವೆಂದರೆ ಅಂಕ ಭಾಷೆಯ ಸರ್ವಭಾಷಾಮಯಿಯಾದ "ಸಿರಿಭೂವಲಯ ಕಾವ್ಯ." ಇದು, ಈ ವರೆಗೆ ಉಪಲಬ್ಧವಾದ ಕನ್ನಡ ಸಾಹಿತ್ಯ ಗ್ರಂಥಗಳಲ್ಲಿ ಹಿರಿಯ ಹೊತ್ತಿಗೆಯಾಗಿದೆ. ಇದರ ಕರ್ತೃವು "ಕುಮುದೇಂದು ಗುರುವು". ಈತನು ರಾಷ್ಟ್ರಕೂಟದ ಪ್ರಸಿದ್ಧ ರಾಜನಾದ ನೃಪತುಂಗನ ಗುರುವು. ಕವಿರಾಜ ಮಾರ್ಗವು ಈ ಗ್ರಂಥದ ಛಾಯಾನುವಾದವಾಗಿದೆ. ಕುಮುದೇಂದು ಗುರುವು ತಾಳ, ಲಯಬದ್ಧವಾದ ೬ ಸಾವಿರ ಸೂತ್ರಗಳಿಂದ ೬ ಲಕ್ಷ ಶ್ಲೋಕಗಳಲ್ಲಿ ಅಂಕೆಯ ಲಿಪಿಯಿಂದ ಕನ್ನಡ ಭಾಷೆಯಲ್ಲಿ ವಿರಚಿಸಿರುತ್ತಾನೆ. ಈ ಗ್ರಂಥವು ಅತ್ಯಲ್ಪ ಕಾಲದಲ್ಲಿಯೇ ರಾಜಪೂಜಿತವಾಗಿ, ವಿದ್ವಜ್ಜನರಿಂದ ಮಾನ್ಯತೆ ಪಡೆದಿದೆ. ಕುಮುದೇಂದು ಗುರುವಿನ ಕಾವ್ಯದಲ್ಲಿ ಯಕ್ಷಗಾನ ನಾಟಕಕ್ಕೆ ಸಮೀಪದ ಸಂಬಂಧವುಳ್ಳ ತ್ರಿಪದಿ, ಚತ್ತಾಣ, ಬೆದಂಡೆಗಳಿವೆ. ಈ ಕಾವ್ಯದ ಬಂಧಗಳು, ಅಕ್ಷರ ಛಂದಸ್ಸು, ಮಾತ್ರಾ ಛಂದಸ್ಸುಗಳಿಗೆ ಸೇರಿದ್ದಲ್ಲ. "ಶಗಣ" ಅಥವಾ ಶಬ್ದಗಣಗಳಿಂದ ರಚಿಸಲ್ಪಟ್ಟಿದೆ. ಇದು ಅಂಶೀ ಗಣಗಳಾದ ಬ್ರಹ್ಮ, ವಿಷ್ಣು, ರುದ್ರಗಣಗಳಿಗೆ ಹೆಚ್ಚಾಗಿ ಸೇರುತ್ತದೆ. ಇವನ ಕಾವ್ಯವೂ ಹೆಚ್ಚಾಗಿ—ಚಕ್ರಬಂಧ, ರಥಬಂಧ, ಪದ್ಮಬಂಧಾದಿ ಅನೇಕ ಬಂಧಗಳನ್ನೊಳಗೊಂಡಿದೆ. ಇದನ್ನು ನೋಡಿದರೆ ಸಂಸ್ಕೃತದ ಸಹಾಯವಿಲ್ಲದೇ, ಅತ್ಯಂತ ಪುರಾತನದ ಕನ್ನಡವು ಸ್ವತಂತ್ರವಾಗಿತ್ತೆಂದು ಗೊತ್ತಾಗುವಂತಿದೆ; ಕಾರಣ "ದಶಾವತಾರ ಆಟ"—ಬೈಲಾಟವೆಂಬುದೇ

ಸಂಸ್ಕೃತಕ್ಕೆ ಪರಿವರ್ತನೆಯಾಗಿ, ಸಂಗೀತ ನಾಟಕವೆಂದು ಕನ್ನಡದಲ್ಲಿ ಹೆಸರುಗೊಂಡಿದೆ. ಯಕ್ಷಗಾನ ನಾಟಕವೆಂಬುದು "ದಶಾವತಾರ ಆಟ"ದ ಭಾಷಾಂತರವಿದೆ; ಆದರೂ ಅದು ಕನ್ನಡಾಂಬೆಯ ಹಕ್ಕಿನ ಹಸುಳೆಯಲ್ಲದೇ ಇನ್ನೊಬ್ಬರದಲ್ಲವೆಂದು ಖಂಡಿತವಾಗಿ ಅನ್ನಬಹುದಾಗಿದೆ.

ನಾಟಕ ಕಾವ್ಯಗಳಿಗೆ ಯಾವ ರೀತಿಯಿಂದಲೂ ಸಮನಾಗುವ "ಯಕ್ಷಗಾನ ಕಾವ್ಯ ನಾಟಕ''ಗಳು ೧೮ನೇ ಶತಮಾನಕ್ಕೂ ಮುಂಚೆ ಕರ್ಣಾನುಕರ್ಣಿಕೆಯಾಗಿಯೋ, ಹೇಗೋ ಬಳಕೆಯಲ್ಲಿದ್ದವು. ೧೮ನೇ ಶತಮಾನದಲ್ಲಿ ಯಕ್ಷಗಾನ ಕಾವ್ಯಗಳನ್ನು ಬರೆದಿಡುವ ಕ್ರಮವು ಆರಂಭವಾಯಿತೆನ್ನಬಹುದು. ರಘುನಾಥ ನಾಯಕನ "ಶ್ರೀ ರುಕ್ಮಿಣೀ ಕೃಷ್ಣ ವಿವಾಹ" ರಾಮ ಕವಿಯ "ಪದ್ಮಾವತಿ" ೧೭೫೫ರಲ್ಲಿ. ತಿಪ್ಪೆಯಾರರ "ಹನುಮದ್ವಿಲಾಸ'' ಪದ್ಮರಾಜನ "ವಿಜಯಕುಮಾರನ ಕಥೆ'' ನಂಜಯ್ಯನ "ಕಪೋತವಾಕ್ಯ'' ಗಂಗನ "ಗಿರಿಜಾಕಲ್ಯಾಣ'' ಸಾಂಬಯ್ಯನ "ಸಾರಂಗಧರನ ಕಥೆ" "ಕರಿಯ ಬಂಟನ ಕಥೆ" ರಂಗಾಚಾರ್ಯರ "ಪ್ರಹ್ಲಾದ ಚರಿತೆ" ಸ್ವಾಮಿಕವಿಯ "ಪಾರಿಜಾತ" ಕಾಶಿರಾಮನ "ಮಲ್ಲಿಕಾರ್ಜುನ ಚರಿತೆ" ಕಸ್ತೂರಿ ಸಿದ್ಧನ "ಚೋರಕಥೆ" ಇವೆಲ್ಲಾ ಹೆಸರಾಗಿವೆ; ನಮಗೆಲ್ಲಾ ಅಚ್ಚಿನ ಅಥವಾ ಕೈಬರೆಹದ ಪ್ರತಿಗಳು ಇನ್ನೂ ಲಭ್ಯವಾಗಿಲ್ಲ. ಅಂತೂ ಸಾಧಾರಣ ೨೫೦ರಷ್ಟು ಯಕ್ಷಗಾನ ಕೃತಿಗಳಿವೆ. ಮೈಸೂರು ವಿಶ್ವವಿದ್ಯಾನಿಲಯದ ಓರಿಯಂಟಲ್ ರಿಸರ್ಚ ಇನಸ್ಟಿಟ್ಯೂಟ್‌ನಲ್ಲಿ ೨೦೦ ವರ್ಷಗಳ ಹಿಂದಿನ ಪ್ರತಿಗಳಿವೆಯಂತೆ. ಇವೆಲ್ಲ ಯಕ್ಷಗಾನ ಕಾವ್ಯಗಗನದಲ್ಲಿ ಮಿನುಗುವ ಚುಕ್ಕಿಗಳಾದರೆ "ಯಕ್ಷಗಾನ ಕವಿಕುಲಾವತಂಸ"ನಾದ ಸುಬ್ಬನ ರಾಮಾಯಣವು ಯಕ್ಷಗಾನಕ್ಕೆ ಸಾಹಿತ್ಯಲೋಕದಲ್ಲಿ ವಿಶಿಷ್ಟವಾದ ಸ್ಥಾನಮಾನವನ್ನು ದೊರಕಿಸಿಕೊಟ್ಟ "ಶ್ರೀಯಶ್ಶಶಾಂಕ''ವೆನ್ನಬಹುದು. ಆತನ "ಪಂಚವಟಿ'' "ಅಂಗದಸಂಧಾನ'' "ಇಂದ್ರಜಿತು'' ಕಾಳಗಗಳು ಸುಂದರ ರಮಣೀಯ ಕಾವ್ಯಗಳಾಗಿವೆ. ಈತನ ತರುವಾಯ ನಂದಳಿಕೆ ಲಕ್ಷ್ಮೀ ನಾರಾಯಣಪ್ಪನ—(ಮುದ್ದಣನ) "ಕುಮಾರವಿಜಯ'' "ರತ್ನಾವತೀ ಕಲ್ಯಾಣ''ಗಳೆಂಬ ಪ್ರಸಂಗಗಳು ಯಕ್ಷಗಾನ ಕಾವ್ಯಾರಾಮದಲ್ಲಿ ಸಂತತವೂ ಸೌರಭವನ್ನು ಸೂಸುತ್ತಿರುವ ಸುಗಂಧಪುಷ್ಪಗಳು. ಈತನ ಪ್ರಸಂಗಗಳಲ್ಲಿ ಯಕ್ಷಗಾನ ಕಾವ್ಯದ ನಾವೀನ್ಯತೆಯು ಕಂಡುಬರುತ್ತದೆ ಹಾಡಲಿಕ್ಕೂ,

ತಾಳದ ವಿವಿಧಗತಿಯನ್ನು ತೋರಿಸಲಿಕ್ಕೂ ತುಂಬಾ ಅನುಕೂಲವಾಗಿವೆ. ಗೆರೆಸೊಪ್ಪೆ ಶಾಂತಪ್ಪಯ್ಯ ಕವಿಯ ಕರ್ಣಪರ್ವ, ದ್ರೋಣಪರ್ವ, ಭೀಷ್ಮ ಪರ್ವ, ರಾವಣ ದಿಗ್ವಿಜಯ, ಸೀತಾಕಲ್ಯಾಣ, ಸೀತಾವಿಯೋಗ, ಜರಾಸಂಧ ಕಾಳಗ, ಲವಣ ಸಂಹಾರ ಇತ್ಯಾದಿ ಕೃತಿಗಳೂ ಹೆಸರಾಗಿವೆ. ಆತ ೧೨೦ ವರ್ಷಗಳ ಹಿಂದಿನವನು.

ದಿವಂಗತ ಕಡಂದಲೆ ರಾಮರಾಯರ ಕೃತಿಗಳು—ದ್ರೌಪದಿ ಪ್ರತಾಪ ಇತ್ಯಾದಿ ಎಷ್ಟೋ ಪ್ರಸಂಗಗಳು, ಅಭಿನಯ ಯೋಗ್ಯವಾಗಿವೆ. ಕವಿಭೂಷಣ ಕೆ. ಪಿ. ವೆಂಕಪ್ಪ ಶೆಟ್ಟರ "ವಾಲಿ-ಸುಗ್ರೀವ", "ಗದಾಯುದ್ಧ", "ಭರತೇಶ ದಿಗ್ವಿಜಯ", "ಲತ್ತ-ಪಗಡೆ", "ಭಾರತದ ಗುರುಕುಲ" ಮುಂತಾದ ಕೃತಿಗಳು ಇತ್ತೀಚಿನವುಗಳಲ್ಲಿ ಅಗ್ರಗಣ್ಯಗಳಾಗಿವೆ. ಶೆಟ್ಟರ "ಭಾರತದ ಗುರುಕುಲ" ಎಂಬ ಕಾವ್ಯಕ್ಕೆ ಮದ್ರಾಸ ಸರಕಾರದಿಂದ ಗೌರವಧನ ಲಭ್ಯವಾಗಿದೆ. ಶ್ರೀ| ಶೆಟ್ಟರು ಪ್ರತಿಭಾವಂತರು, ಉತ್ತಮ ಅರ್ಥಗಾರರು.

ಯಕ್ಷಗಾನ ಸಾಹಿತ್ಯ ಪ್ರಪಂಚವು ಶೆಟ್ಟರಿಗೆ ಕುಮಟೆಯ "ಯಕ್ಷನಾಟಕಗೋಷ್ಠಿಯ ಅಧ್ಯಕ್ಷಸ್ಥಾನವಿತ್ತು ಗೌರವಿಸಿದೆ.

ಉ. ಕ. ಜಿಲ್ಲೆಯಲ್ಲಿ ಅಗ್ರಹಾರದ ಸಭಾಹಿತ ವಿರಚಿತ ಯಕ್ಷಗಾನ ಪ್ರಸಂಗಗಳು ಈಗಲೂ ಪ್ರಚಾರದಲ್ಲಿವೆ; ಹೆಚ್ಚಾಗಿ ಅವು ಅಚ್ಚಾಗಿಲ್ಲ. ಮುದ್ದಣ, ಪಾರ್ತಿಸುಬ್ಬ, (ಯಕ್ಷಗಾನ ಕವಿ ಕುಂಬಳೆ ಪಾರ್ತಿ ಸುಬ್ಬನಲ್ಲ. ಗಿರಿಜಾಸಂಜಾತ, ದೇವಮ್ಮಜಾತನಾದ ಸುಬ್ಬನು; ಆತನು ಬ್ರಹ್ಮಾವರದ ಅಜಪುರದ ವೆಂಕಾರ್ಯಟ ಸುಬ್ಬನೆಂದೂ, ಆತನು ನಿಜವಾಗಿ ಯಕ್ಷಗಾನದ ಕವಿ ಸುಬ್ಬನೆಂದೂ, ಸುಪ್ರಸಿದ್ಧ ಸಾಹಿತಿಗಳಾದ ಕೋ. ಶಿ. ಕಾರಂತರು ಪ್ರತಿಪಾದಿಸಿದ್ದಾರೆ. ಈ ವಿಷಯವು ತುಂಬ ವಾದ-ವಿವಾದಗಳಿಗೆ ಎಡೆ ಕೊಟ್ಟಿದೆ.) ಕವಿಭೂಷಣರ ಕೃತಿಗಳಿಗೂ ಸಭಾಹಿತ ಕೃತಿಗಳಿಗೂ ವ್ಯತ್ಯಾಸ ಶೈಲಿಯಲ್ಲಿ ಮಾತ್ರ; ಅದರಿಂದಲೇ ಇಂದಿಗೂ "ಸಭಾಹಿತ ಶೈಲಿ" ಎಂದು ಉ. ಕ. ಜಿಲ್ಲೆಯಲ್ಲಿ ಯಕ್ಷಗಾನ ಹಾಡುಗಾರಿಕೆಯ ಕ್ರಮ ಜೀವಂತವಿದೆ. ಪದ್ಯಗಳೂ ಹಾಡುಗಾರಿಕೆಗೆ ತಕ್ಕಂತೆ ರಚಿತವಾಗಿವೆ. ಸಭಾಹಿತ ಕೃತಿಗಳ ಪ್ರತಿಗಳನ್ನು ಸಂಶೋಧಿಸುವ ಕಾರ್ಯವನ್ನು ಶ್ರೀ ದುರ್ಗಾಂಬಾ ಪ್ರಾಸಾದಿಕ ಯಕ್ಷನಾಟ್ಯ ಮಂಡಳಿ, ಕರ್ಕಿ, ಅವರು ಕೈಗೊಂಡಿದ್ದಾರೆ; ಕೆಲವು ಓಲೆಪ್ರತಿಗಳೂ ಸಂಶೋಧನೆಯ ಫಲವಾಗಿ ಸಂಪ್ರಾಪ್ತವಾಗಿವೆ. ಈ

ಸಭಾಹಿತ ಶೈಲಿ ಹಾಡುಗಾರಿಕೆಯನ್ನು ಇಂದಿಗೂ ಉಳಿಸಿ, ಬೆಳಸಿಕೊಂಡು ಬಂದ ಶ್ರೇಯಸ್ಸು ಯಲ್ಲಾಪುರ ಸೀಮೆಯ ಭಾಗವತರುಗಳಿಗೂ, ಕರ್ಕಿ ಮೇಳದ ಭಾಗವತರಿಗೂ ಸಲತಕ್ಕದ್ದು ಯಥೋಚಿತವಾಗಿದೆ.

ಉ. ಕ. ಜಿಲ್ಲೆಯ ಮಾಲೆಕೊಡ್ಲಿನ ಶಂಭು ಭಟ್ಟರ "ಚಂದ್ರಹಾಸ ಚರಿತ್ರೆ" ಇತ್ತಲಾಗಿ ಪ್ರಕಟವಾದ ಯಕ್ಷಗಾನ ಪ್ರಸಂಗ. ಇಡೀ ಪ್ರಸಂಗವೇ ಉತ್ತಮವಾಗಿದೆಯೆನ್ನಲು ಸಾಧ್ಯವಿಲ್ಲ. ಮಂಗಳೂರಿನ ಶ್ರೀ। ಜಿ. ಪರಮೇಶ್ವರ ಭಟ್ಟರ "ಚಂದ್ರಹಾಸ ಚರಿತ್ರೆ"ಯೂ ಇದೆ. ಹಲಸನ ಹಳ್ಳಿ ನರಸಿಂಹ ಶಾಸ್ತ್ರಿಗಳೂ "ಚಂದ್ರಹಾಸ ಚರಿತ್ರೆ"ಯನ್ನು ಬರೆದಿದ್ದಾರೆ. ಈ ಪ್ರಸಂಗಗಳನ್ನು ರಸಾತ್ಮಕವಾಗಿ ಅವಲೋಕಿಸಿದರೆ, ಜಿ. ಪರಮೇಶ್ವರ ಭಟ್ಟರ ಪ್ರಸಂಗವೇ ಚೆನ್ನಾಗಿದೆಯೆನ್ನಬಹುದು.

ಉ. ಕ. ಜಿಲ್ಲೆಯ ವಿಖ್ಯಾತ ಅರ್ಥಗಾರರಾದ ಶ್ರೀ। ಸೀತಾರಾಮ ಹೆಗ್ಗಡೆ ತಾರಖಂಡರವರು ಸಹೃದಯರೂ, ಕಲಾಜೀವಿಗಳೂ ಆಗಿದ್ದು, "ಭೀಷ್ಮ ಪ್ರಪಂಚ"ವೆಂಬ ಆಖ್ಯಾನವನ್ನು ಬರೆದಿದ್ದಾರೆ. ಪಾಂಡುರಾಜ, ಧೃತರಾಷ್ಟ್ರ, ಇವರ ಲಗ್ನ, ಪಾಂಡುರಾಜನ ನಿಧನ ಇವೇ ಕಥೆಯ ಮೂಲ ವಸ್ತುಗಳಾಗಿದ್ದು, ಅವನ್ನು ಕೌಶಲ್ಯದಿಂದ ಬಳಸಿದ್ದಾರೆ. ಶೈಲಿಯ ದೃಷ್ಟಿಯಿಂದ ಚೆನ್ನಾಗಿದ್ದು, ಪದ್ಯರಚನೆ ಒಳ್ಳೆಯದಾಗಿದ್ದರೂ, ಅದಿನ್ನೂ ರಂಗಭೂಮಿಯನ್ನು ಕಂಡಿಲ್ಲ.

ಇದೇ ಹೆಗ್ಗಡೆಯವರ ಇನ್ನೊಂದು ಕೃತಿ, ಐತಿಹಾಸಿಕ ಯಕ್ಷಗಾನ ಕಾವ್ಯ—'ವಿಜಯೀ ಕರ್ನಾಟಕ.' ಇದನ್ನು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಾಶಿಸಿದೆ. ಕೇವಲ ಪುರಾಣಗಳನ್ನೇ ಯಕ್ಷಗಾನ ಕಾವ್ಯಗಳಿಗೆ ಬಳಸುತ್ತಿರುವ ಕಾಲದಲ್ಲಿ, ಮುಂದುವರಿದು, "ಸತ್ಯಾಶ್ರಯ ಪುಲಿಕೇಶಿ" ಯೆಂಬ, ಸಾವಿರ ವರ್ಷಗಳಾಚೆಯ ಕನ್ನಡ ವೀರನ ಚರಿತ್ರೆಯನ್ನು ಆಧಾರವಾಗಿಟ್ಟುಕೊಂಡು ಯಕ್ಷಗಾನ ಕಾವ್ಯ ಬರೆದು, ಕ್ರಾಂತಿಯೆಬ್ಬಿಸಿದ್ದಾರೆ. ಈಗಿನ ಸುಧಾರಣೆಯ ಕಾಲದಲ್ಲಿ ಕೇವಲ ೩--೪ ತಾಸುಗಳಲ್ಲಿ ಆಡಿ, ಮುಗಿಸಬಹುದಾದ ಸಣ್ಣ, ಸುಂದರ, ಯಕ್ಷಗಾನ ಕಾವ್ಯವಿದು. ಇಡೀ ಪ್ರಸಂಗಕ್ಕೆ ರತ್ನಪ್ರಾಯವಾಗಿ, ಸಾರಂಗರಾಗದ, ಅಷ್ಟತಾಳದ "ಮಿಂಚಿನಂದದಲಿ ಭೂಪ। ಕಾಣುತ ಅರ। ಸಂಜೆಗಾಮಿನಿಯ ರೂಪ" ಎಂಬ ಪದ್ಯ ಸುಂದರತಮವಾಗಿ ರಚಿತವಾಗಿದೆ. ಅದೇ ಸಾಕು ಹೆಗ್ಗಡೆಯವರ "ಯಕ್ಷ

ಗಾನ ಜನಕ"ನೆಂಬ ಉ. ಕನ್ನಡದ ಜನತೆಯಿತ್ತ ಹೆಸರನ್ನು ಸಾರ್ಥಕ ಗೊಳಿಸಲಿಕ್ಕೆ. ಶ್ರೀ। ಬೆಳಸಲಿಗೆ ಗಣಪತಿ ಹೆಗ್ಗಡೆ ಅವರೂ, "ಸಂಪೂರ್ಣ ರಾಮಾಯಣ"ವನ್ನು ರಚಿಸಿದ್ದಾರೆ. ಅವರ "ಸಮಗ್ರ ಮಹಾಭಾರತ" ಚೆನ್ನಾಗಿದೆ. ಪಂಪ, ರನ್ನ, ವ್ಯಾಸರ ಭಾರತಗಳನ್ನೆಲ್ಲ ಅಭ್ಯಾಸಿಸಿದ ಅವರ ಕಾವ್ಯ ಪ್ರತಿಭೆ ಅಮೋಘವಾಗಿದೆ. ಅವರ ಭಾರತದ ವಿಮರ್ಶೆಯನ್ನು ಸುದೀರ್ಘವಾಗಿ ಮಾಡಲಾಗುವದು. ಗುಂಡೂಮನೆ ಸೀತಾರಾಮಯ್ಯರೆಂಬ ಸಾಗರ ತಾಲೂಕಿನ ಭಾಗವತರೊಬ್ಬರು, "ಸಂಪೂರ್ಣ ರಾಮಾಯಣ"ವೆಂಬ ಯಕ್ಷಗಾನ ಕಾವ್ಯವನ್ನು ರಚಿಸಿದ್ದಾರೆ. ಶ್ರೀ। ಜಾನಕೈ ತಿಮ್ಮಪ್ಪ ಹೆಗ್ಗಡೆ ಯವರೂ "ಸಂಪೂರ್ಣ ರಾಮಾಯಣ"ವನ್ನು ಬರೆದಿದ್ದಾರೆ. ಈ ಮೂರು ಪ್ರಸಂಗಗಳಲ್ಲಿ ಜಾನಕೈ ಅವರ ಪ್ರಸಂಗವೇ ಅತ್ಯುತ್ತಮವಾಗಿದೆಯೆನ್ನ ಬೇಕು. ಸಾಗರದವರು ಸ್ವತಃ ಭಾಗವತರಾದರೂ, ಪ್ರಥಮ ಕೃತಿ ಯಾದುದರಿಂದಲೋ ಏನೋ ಅಷ್ಟು ಉತ್ತಮ ಕೃತಿಯಾಗಲಿಲ್ಲ. ಶ್ರೀ। ಬೆಳಸಲಿಗೆಯವರ ಪ್ರತಿಭೆ, ಕೈವಾಡ "ಸಂಪೂರ್ಣ ಭಾರತ"ದಲ್ಲಿ ಕಂಡು ಬಂದಷ್ಟು, ರಾಮಾಯಣದಲ್ಲಿ ಕಾಣುವುದಿಲ್ಲ.

ಶ್ರೀ। ಜಾನಕೈ ತಿಮ್ಮಪ್ಪ ವೆಂಕಪ್ಪ ಹೆಗ್ಗಡೆಯವರು, ಸಿದ್ದಾಪುರ ತಾಲೂಕಿನವರು. ಉತ್ತಮ ಮೃದಂಗವಾದಕರು. "ಸಂಪೂರ್ಣ ರಾಮಾ ಯಣ" "ಮಾರುತಿ ಪ್ರತಾಪ" "ಸತ್ಯ ಹರಿಶ್ಚಂದ್ರ" "ಮದನ ಸುಂದರಿ ಸ್ವಯಂವರ" "ಸತಿ ಅನಸೂಯಾ" "ಚಂದ್ರಹಾಸ ಚರಿತ್ರೆ" (ಸುಟ್ಟು ಹೋಗಿದೆ) ಮುಂತಾದ ಯಕ್ಷಗಾನ ಕಾವ್ಯಗಳನ್ನು ಬರೆದವರು. ರಂಗಭೂಮಿಗುಚಿತವಾಗುವಂತೆ ಕಾವ್ಯಗಳನ್ನು ರಚಿಸುವದರಲ್ಲಿ ಹೆಗ್ಗಡೆ ಯವರದು ಪಳಗಿದ ಕೈ. ಮನೆಗೆ ಬಂದರೆ ಅಲ್ಲಿ ೨೫--೩೦ ಜನರ ಗಲಾಟೆ. ಹಗಲು ತುಂಬಾ ತೋಟ, ಗದ್ದೆಗಳಲ್ಲಿ ಪಡುವ ದೈಹಿಕ ಪರಿಶ್ರಮ; ಅಲ್ಲದೆ ಮನೆತನದ ಸಂಪೂರ್ಣ ಹೊಣೆಗಾರಿಕೆ. ಇಂತಹ ಪರಿಸ್ಥಿತಿಯಲ್ಲಿಯೂ ಇವರಿಗೆ ಕಾವ್ಯಗಳನ್ನು ರಚಿಸುವದೆಂದರೆ ಕವಳ ಹಾಕಿದಂತೆ. ಅಭಿನ ಯಕ್ಕೂ, ಹಾಡಲಿಕ್ಕೂ, ಕುಣಿತಕ್ಕೂ, ಅರ್ಥಗಾರಿಕೆಗೂ ಸುಲಭವಾಗು ವಂತಹ ಲಾಲಿತ್ಯ ಪೂರ್ಣವಾದ ಶೈಲಿ, ಇವರ ಸೊತ್ತಾಗಿದೆ. ಹರಿಶ್ಚಂದ್ರ ಪ್ರಸಂಗದ "ಕಂಡೆ ಸರ್ವರ ಪಾದವಾ" ಎಂಬ ಪದ್ಯ ಸಮೂಹಗಳು, ಹೃದಯಂಗಮವಾಗಿವೆ. ಚಿತ್ರವೇಧಿಯಾಗಿವೆ. ಇವರ "ಮಾರುತಿ ಪ್ರತಾಪ"

ಕೊಂಡದ ಕುಳಿಮೇಳದವರಿಂದಲೂ, ಕರ್ಕಿಮೇಳದವರಿಂದಲೂ, ರಂಗ ಭೂಮಿಯನ್ನು ಕಂಡಿದೆ. "ಸತ್ಯ ಹರಿಶ್ಚಂದ್ರ" ಆಖ್ಯಾನವು ಇಡಗುಂಜಿ ಮೇಳದವರಿಂದ ರಂಗಭೂಮಿಯನ್ನು ಕಂಡಿದೆ. ಒಟ್ಟಿನಲ್ಲಿ ಸಭಾಹಿತರ ನಂತರ, ನಮ್ಮ ಜಿಲ್ಲೆಯಲ್ಲಿ ನಾವು ಶ್ರೀ| ಜಾನಕೈ ತಿಮ್ಮಪ್ಪ ಹೆಗ್ಗಡೆ ಯವರನ್ನೇ ಉತ್ತಮ ಯಕ್ಷಗಾನ ಕವಿಗಳೆಂದು ಹೆಸರಿಟ್ಟು ಹೇಳಬಹುದು.

ಅವ್ಮನಳ್ಳಿಯ "ಆತ್ಮಾರಾಮ" ಎನ್ನುವವರೊಬ್ಬರು, ಯಕ್ಷಗಾನ ಕಾವ್ಯ ರಚಿಸುವವರಿದ್ದಾರೆ. ಭಗವಾನ್ ಶ್ರೀಧರ ಸ್ವಾಮಿಗಳ ಪರಮ ಭಕ್ತರಾದ ಆತ್ಮಾರಾಮರು "ಸತೀ ಶಕ್ತಿ" "ವಿವೇಕ ವಿಜಯ" ಎಂಬೆರಡು ಆಖ್ಯಾನಗಳನ್ನು ಬರೆದಿದ್ದಾರೆ "ಸತೀ ಶಕ್ತಿ" ಪತಿವ್ರತಾ ಶಿರೋಮಣಿ ಯಾದ ಸಾವಿತ್ರಿಯ ಚರಿತ್ರೆ. ಈ ಪ್ರಸಂಗವನ್ನು ಗೋಕರ್ಣದ "ಭದ್ರಕಾಳಿ ಯಕ್ಷಗಾನ ಮಂಡಳಿ"ಯವರು ಎಷ್ಟೋ ಸಲ ಅಭಿನಯಿಸಿದ್ದಾರೆ. "ವಿವೇಕ ವಿಜಯ" ಇದು ಕ್ಲಿಷ್ಟವಾದ ವೇದಾಂತ ವಿಚಾರಗಳನ್ನೊಳ ಗೊಂಡಿದ್ದು, ಪ್ರವೃತ್ತಿ, ನಿವೃತ್ತಿಗಳ ಹೋರಾಟವೇ ಪ್ರಧಾನವಾಗಿರುವ, ಯಕ್ಷಗಾನ ನಟರಿಗೆ, "ಕಬ್ಬಿಣದ ಕಡಲೆ"ಯಂತಿರುವ ಒಂದು ಪ್ರಸಂಗೆ ವಾಗಿದೆ. ಇದಕ್ಕೆ "ಆತ್ಮಾರಾಮ"ರೇ ಟೀಕೆಯನ್ನೂ ಬರೆದಿದ್ದಾರೆ; ಆದರೂ ಇದು ಯಕ್ಷಗಾನರಂಗವನ್ನು ಕಾಣುವುದು ದುಸ್ಸಾಧ್ಯವಾದುದಾಗಿದೆ. ಪ್ರವೃತ್ತಿ, ನಿವೃತ್ತಿಗಳ ಹೋರಾಟಕ್ಕೆ ನಾಟಕೀಯವಾದ ರಂಗುಕೊಟ್ಟು, ಕಾಮ, ಕ್ರೋಧಾದಿ ಷಡ್ ವೈರಿಗಳಿಗೆಲ್ಲಾ ಯೋಗ್ಯ ಪಾತ್ರತೆಕೊಟ್ಟು ನವೀನವಾದ ಈ ಬಗೆಯ ಯಕ್ಷಗಾನ ಪ್ರಸಂಗ ರಚಿಸಿ, ಟೀಕೆಯನ್ನೂ ಸಹ ಬರೆದಂಥ "ಆತ್ಮಾರಾಮ"ರ ಕಾವ್ಯಶಕ್ತಿ ಅಮೋಘವಾದದ್ದು ಎಂದು ಹೇಳಬೇಕಾಗು ತ್ತದೆ. "ರುಕ್ಮಾಂಗದ ಚರಿತ್ರೆ"ಗೂ ೧--೨ ಸನ್ನಿವೇಶಗಳನ್ನು ಹೊಸದಾಗಿ ಸೇರಿಸಿದ್ದಾರೆ. ಮೊದಲೇ ಒಂದು ರಾತ್ರಿ ಸಾಕಾಗದ ಆ ಪ್ರಸಂಗಕ್ಕೆ, ಹೊಸ ಸನ್ನಿವೇಶಗಳು ಬೇಕಾಗಿದ್ದಿಲ್ಲ; ಆದರೂ ಸೇರಿಸಿದ್ದು ತಪ್ಪಾಗಲಿಲ್ಲ.

---

‘ಒಂದಾಣೆ ಮಾಲೆ’ ಪುಸ್ತಕಗಳನ್ನು ಕೊಂಡುಕೊಂಡ ಕೂಡಲೇ, ಹೊಲಿದ ಸರಿಗೆ ತೆಗೆದುಹಾಕಿ, ನೂಲಿನಿಂದ ಹೊಲಿಯಿರಿ.

Edited, Printed & Published by K. V. Shenoy
at The Prabhat Printers, Ltd., Mangalore.